ಬೆಲೆ : ಎರಡು ಆಣೆ

ವರ್ಗಣಿ ದರ
(ಅಂಚೆವೆಚ್ಚ ಸಹ)
ವರ್ಷಕ್ಕೆ ರೂ. ೬-೮-೦
೬ ತಿಂಗಳಿಗೆ ,, ೩-೮-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೬ ಆಣೆ
ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
W-E-E-K-L-Y
HUBLI
MARCH 17
1947

ಸಂಪಾದಕರು:
ಹೆ. ರಾ. ಪುರೋಹಿತ, ಎಂ. ಎ.
] ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ [ Editor H. R. Purohit, M. A.

ಸಂಪುಟ ೧೮ ] ೩೩೦೦ ಹುಬ್ಬಳ್ಳಿ ಸೋಮವಾರ ತಾರೀಖು ೧೭ — ೩ — ೧೯೪೭ ೦೦೩೩ [ ಸಂಚಿಕೆ ೪೩

# ಹಿಂದುಸ್ತಾನ, ಏಶಿಯಾದ ರಾಜಕೀಯ, ಆರ್ಥಿಕ ಮುಂದಾಳ್ತನ ವಹಿಸಬೇಕು: ಅಮೇರಿಕೆಯ ಅಪೇಕ್ಷೆ: ಹಿಂದುಸ್ತಾನದ ವಿಘುದ್ಧ ಅಮೇರಿಕೆಯ ದುರುದ್ದೇಶವಿಲ್ಲ

(ಲುಯಿ ಫಿಶರರಿಂದ)

ಇಂಗ್ಲಂಡು ಹಿಂದುಸ್ತಾನವನ್ನು ಬಿಟ್ಟು ಹೋಗಲು ಬಯಸುತ್ತಿರಲಿಕ್ಕಿಲ್ಲವೆಂದು ಯಾರಾದರೂ ಸಂಶಯಪಡುತ್ತಿದ್ದರೆ ಅವನು ಆತ್ಮವಂಚನೆ ಮಾಡಿಕೊಳ್ಳುತ್ತಿದ್ದಾನೆ. ಬ್ರಿಟಿಶರನ್ನೆ ಪೀರಿಸಿರುವ ಆರ್ಥಿಕ ಮತ್ತು ಹಣಕಾಸಿನ ಅನಾಹುತ ಎಷ್ಟು ಭಯಂಕರವಾಗಿದೆಯೆಂದರೆ, ಅಟ್ಲೀ ಸರಕಾರವಿಂದು ಹಿಂದುಸ್ತಾನದಲ್ಲಿ ಮಾತ್ರವಲ್ಲ, ಇಜಿಪ್ತ, ಪಾಲಿಸ್ತಾನ, ತುರ್ಕಿ ಮತ್ತು ಬೇರೆ ಹಲವು ಯುರೋಪಿಯನ್ ರಾಷ್ಟ್ರಗಳಲ್ಲಿಯೂ ತನ್ನ ಹೊಣೆಗಳನ್ನು ಕಡಿಮೆಮಾಡಿಕೊಳ್ಳುತ್ತಿದೆ.

ಅಮೇರಿಕೆಯು ತಲೆ ತಿನ್ನುತ್ತಿರುವ ಚಿಂತೆ ಒಂದೆ—ಬ್ರಿಟಿಶರು ಹೊರಟು ಹೋದನಂತರ ಉಂಟಾಗುವ ಶೂನ್ಯ ಹೇಗೆ ತುಂಬುವದು? ಸ್ವತಂತ್ರ ಹಿಂದುಸ್ತಾನ ಜಗತ್ತಿನ ಸ್ಥಿರತೆಗೆ ಸಾಧಕವಾಗಿ ಚೈತನ್ಯ ತೋರಿಸಿದರೆ ಅದರಿಂದ ಅಮೇರಿಕನ್ ವರಿಷ್ಠರಿಗೆ ಸಂತೋಷವೇ ಅಗುವದು. ನಿಕಟ ಪೂರ್ವ, ಮಧ್ಯಪೂರ್ವ ದೇಶಗಳ ಆರ್ಥಿಕ ಸಮೃದ್ಧಿಗೂ ರಾಜಕೀಯ ಸ್ಥೈರ್ಯಕ್ಕೂ ಅದು ಸಹಾಯಕವಾದರಂತೂ ಅದು ಅಮೇರಿಕೆಗೆ ಇನ್ನಷ್ಟು ಸ್ವಾಗತಾರ್ಹವೆನಿಸದಿರದು.

ಬ್ರಿಟನ್ನಿಗೆ ಒಳ್ಳೇ ಹಣಕಾಸಿನ ಮುಗ್ಗಟ್ಟು ನಂಟುಬಿದ್ದಿದೆ. ಆದುದರಿಂದ ಅಮೇರಿಕೆಯ ಹೆಗಲಮೇಲೆ ದಿನಹೋದಂತೆ ಹೆಚ್ಚು ಹೆಚ್ಚು ಕರ್ತವ್ಯಗಳೂ ಹೊಣೆಗಾರಿಕೆಗಳೂ ಹೇರಲ್ಪಡುತ್ತಿವೆ. ಅವುಗಳನ್ನು ವಹಿಸಲು ಅಮೇರಿಕೆಯ ಜನತೆ ಸಿದ್ಧವಾಗಿಯೂ ಇಲ್ಲ ಆತುರ ಪಡುವದೂ ಇಲ್ಲ. ಆದುದರಿಂದ ಹಿಂದುಸ್ತಾನ ಯಾದವೀ ಕಲಹಕ್ಕೆ ಬೀಳದೆ ಏಶಿಯಾದ ಸ್ಥಿರತೆಯ ಕಲ್ಲುಕಂಬವಾಗಬೇಕೆಂಬ ಆಶೆಯನ್ನು ಅಮೇರಿಕನ್ ಸರಕಾರ ಕಟ್ಟಿಕೊಂಡಿದೆ.

## ತಿಕ್ಕಾಟ ಅನಿವಾರ್ಯವೆ?

ಇದಕ್ಕೋಸ್ಕರವೇ ಹಿಂದುಸ್ತಾನದ ಆಂತರಿಕ ಸ್ಥಿತ್ಯಂತರಗಳಲ್ಲಿ ಅಮೇರಿಕನ್ ಸರಕಾರ ಎಂದಿಗಿಂತಲೂ ಹೆಚ್ಚು ಆಸ್ಥೆ ವಹಿಸುತ್ತಿರುವದು. ಹಿಂದುಸ್ತಾನದ ಸ್ಥಿತಿಗತಿಗಳನ್ನು ಸರಿಯಾಗಿ ಅರಿಯದ ಸಾಮಾನ್ಯ ಅಮೇರಿಕನ್ ಪ್ರಜೆ ಏನೇನೋ ಲೆಕ್ಕ ಹಾಕುತ್ತಾನೆ. ಅವನೆನ್ನುತ್ತಾನೆ, “ಬ್ರಿಟಿಶರು ಅನೇಕ ವರ್ಷಗಳಿಂದ ಹಿಂದುಸ್ತಾನದಲ್ಲಿ ಶಾಂತಿ ಸುವ್ಯವಸ್ಥೆಗಳನ್ನು ಕಾಯ್ದುಕೊಂಡು ಬಂದಿದ್ದಾರೆ. ಅವರಿನ್ನು ಬೇಗನೆ ಹೊರಟು ಹೋಗುವವರಿದ್ದಾರೆ. ಹಿಂದೂ ಮುಸ್ಲಿಮರಿಗೆ ಒಬ್ಬರನ್ನು ಕಂಡರೆ ಇನ್ನೊಬ್ಬರಿಗಾಗುವದಿಲ್ಲ. ಆದುದರಿಂದ ಹಿಂದುಸ್ತಾನದಲ್ಲಿ ಯಾದವೀ ಯುದ್ಧವಾಗುವದು ಅನಿವಾರ್ಯವೇ ಸರಿ.”

ವಾಶಿಂಗ್‌ಟನ್ನಿನಲ್ಲಿರುವ ಅಧಿಕಾರಿ ವರ್ಗದ ಮನಸ್ಸೂ ಈ ಅತಿ ಸರಳ ವಿಚಾರಧಾರೆಯನ್ನೆ ಅನುಸರಿಸುತ್ತದೆಯೆಂದು ಹೇಳಲಾಗಲ್ಲ. ಆದರೂ ಹಿಂದುಸ್ತಾನದಲ್ಲಿ ಯಾದವೀ ಯುದ್ಧದ ಅನಿವಾರ್ಯತೆಯ ಬಗ್ಗೆ ಒಂದು ಬಗೆಯ ಅದೃಷ್ಟವಾದವೇ ಹಬ್ಬಿದೆಯೆಂಬ ಸುದ್ದಿ ಅಮೇರಿಕನ್ ರಾಜಧಾನಿಗೆ ತಲುಪಿದೆ. ಈ ಸುದ್ದಿಯ ಪ್ರಕಾರ, ಅನೇಕ ಹಿಂದೀಯರು, ಕೊನೆಗೊಮ್ಮೆ ಪರಿಸ್ಥಿತಿ ತಿಳಿಯಾಗಬೇಕಾದರೆ, ಪ್ರಮುಖ ಧಾರ್ಮಿಕ ಪಂಗಡಗಳಲ್ಲಿ ಹೋರಾಟವುಂಟಾಗುವದು ಸ್ವಾಗತಾರ್ಹವೆಂದೇ ಬಗೆಯುತ್ತಿರುವರಂತೆ. ಈ ಕಲ್ಪನೆ ಸುಳ್ಳೆಂದು ಘಟನೆಗಳೇ ಸಿದ್ಧಪಡಿಸಬೇಕಲ್ಲದೆ ಬೇರೆ ಉಪಾಯವಿಲ್ಲ.

## ಆರ್ಥಿಕ ಚಟುವಟಿಕೆಗಳು

ಈ ನಡುವೆ ವಸ್ತುಸ್ಥಿತಿಯನ್ನು ಇದ್ದಕ್ಕಿದ್ದಂತೆ ಸ್ಫುಟಗೊಳಿಸಿದರೆ ಅದರಿಂದ ಹಿತವಾದೀತು. ಇಂದು ಹಿಂದೀ ಸೈನ್ಯದಲ್ಲಿ ಮುಸ್ಲಿಮರು ಬಹು ಸಂಖ್ಯಾಕರಾಗಿಲ್ಲವೆಂದು ಹೇಳಿದರೆ ಅನೇಕ ಅಮೇರಿಕನ್ನರಿಗೆ ಆಶ್ಚರ್ಯವಾಗಬಹುದು. ಗಲಭೆ ಆಹಾರ ಕೊರತೆ ಮೊದಲಾದವುಗಳ ಮಧ್ಯದಲ್ಲಿಯೂ ಹಿಂದುಸ್ತಾನದಲ್ಲಿ ಆರ್ಥಿಕ ಚಟುವಟಿಕೆ ಬಿರುಸಾಗಿ ಸಾಗಿದೆಯೆಂದೂ ಆ ಚಟುವಟಿಕೆ ಇನ್ನಷ್ಟು ಹೆಚ್ಚಲು ಯೋಜನೆಗಳಿವೆಯೆಂದೂ ಹೇಳಿದರೆ ಅವರಿಗೆ ಒಮ್ಮಿಂದೊಮ್ಮೆ ಮನವರಿಕೆಯಾಗುವದೇ ಕಠಿಣವಾದೀತು ಪತ್ರಿಕೆಗಳಲ್ಲಿನ ತಲೆ ಬರೆಹಗಳಿಂದ ಹಿಂದುಸ್ತಾನದಲ್ಲಿ ಇರಿತಗಳೂ ರಾಜಕೀಯ ಬಿಕ್ಕಟ್ಟುಗಳೂ ಹೊರತು ಬೇರೇನೇನೂ ಜರಗುತ್ತಿಲ್ಲವೆಂಬ ಭಾವನೆ ಬೇರೂರಿಹೋಗಿದೆ.

ಶ್ರೀ ಅಸಫ ಅಲ್ಲಿಯವರಿಗೆ ಅಮೇರಿಕೆಯಲ್ಲಿ ಒಳ್ಳೆ ಬಿಗಿಯಾದ ಕಾರ್ಯಕಾದಿದೆ. ವ್ಯಾಪಾರಿ ಮತ್ತು ಸಾಂಸ್ಕೃತಿಕ ಸಂಬಂಧಗಳನ್ನ ಬಲಗೊಳಿಸಲು ಅವರು ತಮ್ಮ ದೊಡ್ಡ ಸಿಬಂದಿಯನ್ನು ಉಪಯೋಗಿಸಬಹುದು. ಅವರು ಬಂದು ಸೇರುತ್ತಲೆ ಅಧಿಕಾರಿಗಳಿಂದಲೂ ಪತ್ರಿಕೆಗಳಿಂದಲೂ ಜನತೆಯಿಂದಲೂ ಅವರಿಗೆ ಸ್ನೇಹಪೂರ್ಣ ಸ್ವಾಗತ ದೊರಕಿತು.

ಹೊಸದಿಲ್ಲಿಗೆ ಅಮೇರಿಕನ್ ರಾಯಭಾರಿಯೊಬ್ಬನನ್ನು ಬೇಗನೆ ಕಳಿಸಲಾಗುವದು. ಈ ವರೆಗೆ ಇದು ಸಾಧ್ಯವಾಗದಿರಲು ಈ ಮಹತ್ವದ ಸ್ಥಾನಕ್ಕೆ ಸಾಕಷ್ಟು ಯೋಗ್ಯತಾ ಸಂಪತ್ತಿಯುಳ್ಳವನು ದೊರಕದಿದ್ದುದೇ ಕಾರಣ.

ಅಸಫ ಅಲ್ಲಿಯವರು ಅಮೇರಿಕೆಯಲ್ಲಿ ಬಂದು ಸೇರುವದಕ್ಕೂ ಬ್ರಿಟಿಶ ಆರ್ಥಿಕ ಬಿಕ್ಕಟ್ಟಿನಿಂದ ಅಮೇರಿಕೆಯ ವಿದೇಶ ಧೋರಣೆಯಲ್ಲುಂಟಾಗಬಹುದಾದ ತೊಡಕುಗಳು ಅಮೇರಿಕನ್ ಅಧಿಕಾರಿವರ್ಗಗಳಿಗೆ ಮನವರಿಕೆಯಾಗುವದಕ್ಕೂ ತಾಳೆ ಬಿತ್ತು.

## ಅಮೇರಿಕೆಯ ನಿಲುಮೆ

ಸದ್ಯಕ್ಕಂತೂ ಈ ತೊಡಕುಗಳು ಭೂಮಧ್ಯ ಸಮುದ್ರದ ಸುತ್ತಣ ವಿವಿಧ ದೇಶಗಳಿಗಷ್ಟೇ ಸೀಮಿತವಾಗಿದ್ದರೂ ಹಣದ ಮುಗ್ಗಟ್ಟಿನ ಫಲವಾಗಿ, ಇಂಗ್ಲಂಡು ಯುರೋಪಿನಲ್ಲಿ ಇನ್ನಷ್ಟು ಹಿಂನಡೆದು ಸ್ವದೇಶದ ಸಮೀಪಕ್ಕಷ್ಟೇ ಅಮರಿಕೊಳ್ಳಬೇಕಾದೀತೆಂದು ಭಯವುಂಟಾಗಿದೆ. ಆದುದರಿಂದ ಅಮೇರಿಕೆಯ ಕಣ್ಣು ಕಟ್ಟಿದಂತಾಗಿವೆ. ಹಿಂದುಸ್ತಾನ ಬಲಿಷ್ಠವಾಗಿ ಏಶಿಯಾದ ಐಕ್ಯದ ಮಧ್ಯಬಿಂದುವೆನಿಸಿಕೊಂಡು ತಲೆಯೆತ್ತಿದರೆ ಅಮೇರಿಕನ್ ಅಧಿಕಾರಿ ವರ್ಗಗಳ ಚಿಂತೆ ಎಷ್ಟೋ ತಿಳಿಯಾಗಬಹುದೆಂದು ನನಗೆ ನಿಶ್ಚಯವಾಗಿ ಅನಿಸತೊಡಗಿದೆ.

ಚೀನವಿಂದು ಈ ಭೂಮಿಕೆಯನ್ನು ವಹಿಸಲಾರದು. ಅದರ ಆಂತರಿಕ ಅನೈಕ್ಯದ ಕಾರಣದಿಂದ.

ಹಿಂದುಸ್ತಾನದಲ್ಲಿ ತನ್ನ ರಾಜಕೀಯ ಅಥವಾ ಆರ್ಥಿಕ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬ ಆಕಾಂಕ್ಷೆ ಅಮೇರಿಕೆಯ ಮನಸಿನಲ್ಲಿ ಎಳ್ಳಷ್ಟೂ ಇಲ್ಲ. ಬ್ರಿಟನ್ನಿನ ಆರ್ಥಿಕ ದುರಭಿಸಂಧಿಯಿಂದ ಶಾಂತಿ ಪುನರ್ವ್ಯವಸ್ಥೆಗಳ ಕಾರ್ಯದಲ್ಲಾದ ದೊಡ್ಡ ದೊಡ್ಡ ಗಾಯಗಳನ್ನು ಮಾಯಿಸುವ ಅವಸರದ ಕಾರ್ಯಗಳೇ ಅಮೇರಿಕೆಗೆ ಕೈತುಂಬ ಇವೆ.

ವಾಶಿಂಗ್‌ಟನ್ನಿನಲ್ಲಿ ಅತಿ ಗಂಭೀರರಾದ ಮುತ್ಸದ್ದಿಗಳು ಕೂಡ, “ಇಂಗ್ಲಂಡಿನ ಅವಸ್ಥೆ ಮುಗಿಯಿತು—ಇಂಗ್ಲಂಡು ಹಾಳಾಯಿತು,” ಎಂದು ಹೇಳುವದನ್ನು ಕೇಳುತ್ತೇವೆ. ಇದು ಅಕಾರಣ ನಿರಾಶಾವಾದವಾಗಿರಬಹುದು. ಆದರೂ ಬ್ರಿಟನ್ನಿನ ವೈದೇಶಿಕ ಮತ್ತು ರಾಜಕೀಯ ಚಟುವಟಿಕೆಗಳು ದಿನ ಹೋದಂತೆ ಮುದುರುತ್ತಿರುವ ಸುದ್ದಿಗಳು ಬರುತ್ತಲೇ ಇವೆ. ಈ ಸ್ಥಿತಿಗತಿಗಳಿಂದ ಅಮೇರಿಕೆಯ ಹೆಗಲ ಮೇಲಿನ ಭಾರ ದಿನದಿನವೂ ಹೆಚ್ಚುತ್ತಿದೆ. ಅದರ ಹೆಗಲು ಬಲಿಷ್ಠವಾಗಿರುವದೇನೊ ನಿಜ, ಆದರೆ ಹೊರೆಹೊರುವ ಆಸಕ್ತಿ ಅದಕ್ಕಿಲ್ಲ.

ಸಾಧಾರಣ ಅಮೇರಿಕನ್ನನು ತನ್ನ ಮನೆಯಲ್ಲಿಯೆ ಅರಾಮು ಬಾಳಲು ಬಯಸಿಯಾನು ಹೊರತು ತನ್ನ ಜೇಬಿಗೂ ಜಗತ್ತಿನ ಶಾಂತಿಗೂ ಎಷ್ಟೇ ಲಾಭದಾಯಕವಾಗಿದ್ದರೂ ದೂರದೇಶಗಳ ಹೊರೆಯನ್ನು ಹೊರಲು ಸಿದ್ಧನಾಗಲಿಕ್ಕಿಲ್ಲ. ಸಾಧಾರಣ ಅಮೇರಿಕನ್ನನ ಈ ಮನೋಭಾವ ಅವನ ಪ್ರತಿನಿಧಿಗಳ ಮೂಲಕ ಶಾಸನಸಭೆಯಲ್ಲಿ ಬಿಂಬಿತವಾಗಿ ಅದು ಸರಕಾರದ ಮನೋಭಾವವೇ ಆಗಿ ಮಾರ್ಪಡುತ್ತದೆ. ಏಕೆಂದರೆ ಶಾಸನ ಸಭಾಸದರು ವಿದೇಶಗಳಲ್ಲಿ ರಾಜಕೀಯ ಮತ್ತು ಆರ್ಥಿಕ ಕ್ರಿಯೆಗಳನ್ನು ಸಾಗಿಸಲು ಸರಕಾರಕ್ಕೆ ಹಣ ಮಂಜೂರ ಮಾಡಲು ಹಿಂಜರಿಯುತ್ತಾರೆ. ಇಂಥ ಸಮೃದ್ಧ ದೇಶದ ಸರಕಾರ ಇಷ್ಟು ಬಡತನದಲ್ಲಿರುವದೊಂದು ಆಶ್ಚರ್ಯವೇ ಸರಿ.

ಪರಿಸ್ಥಿತಿಯ ಒತ್ತಡದಿಂದ, ಅಮೇರಿಕನ್ ಸರಕಾರಕ್ಕೆ ಜಗತ್ತಿನಲ್ಲಿ ಪ್ರಜಾತಂತ್ರದ ಬಲ ಹೆಚ್ಚಿಸುವ ಕೆಲಸದಲ್ಲಿ ಒಳ್ಳೆ ಬಲಿಷ್ಠ ಸಹಕಾರಿಗಳನ್ನು ಹುಡುಕುವ ಅವಶ್ಯಕತೆ ಉಂಟಾಗಿದೆ. ಎಲ್ಲ ಕಡೆಯಿಂದಲೂ ಬರುವ ಸಹಕಾರವನ್ನು ಸ್ವೀಕರಿಸಲಾಗುವದಲ್ಲದೆ ಎಲ್ಲರಿಗೂ ಕೊನೆಗೆ ಸಹಾಯವನ್ನು ನೀಡಲಾಗುವದು.

## ಸಾಮ್ರಾಜ್ಯದ ದಿವಾಳಿಯೇಕೆ?

ಬ್ರಿಟಿಶ ಬಿಕ್ಕಟ್ಟಿನಿಂದ ಇಡಿ ಜಗತ್ತಿನ ರಾಜಕಾರಣವೇ ಪಲ್ಲಟಿಸುವದೆಂದು ನನಗೆ ತೋರುತ್ತದೆ. ಕಳೆದ ಅಕ್ಟೋಬರ ತಿಂಗಳಲ್ಲಿ ನಾನು ಲಂಡನ್ನಿನಲ್ಲಿ ಮುಖ್ಯ ಮಂತ್ರಿ ಅಟ್ಲೀಯವರನ್ನು ಭೆಟ್ಟಿಯಾದಾಗ, ಜರ್ಮನಿಯ ಉದ್ಯೋಗಗಳ ರಾಷ್ಟ್ರೀಕರಣದ ಬಗ್ಗೆ ಸರಕಾರದ ಯೋಜನೆಗಳ ಬಗ್ಗೆ ಕೇಳಿದೆ. ಅವರು ಚಿಲುಮೆಯನ್ನು ಬಾಯಿಂದ ಹೊರತೆಗೆದು ಹೇಳಿದರು “ಹೌದು, ಆದರೆ ನಮ್ಮ ಹತ್ತಿರ ಅದಕ್ಕೆ ಬೇಕಾದ ರೊಕ್ಕವಿಲ್ಲ. ಅಮೇರಿಕೆ ಹಣ ಕೊಡುವದೆ?”

ಈ ರೊಕ್ಕವಿಲ್ಲದ ಸಮಸ್ಯೆ ಅಂದಿಗಿಂತಲೂ ಇಂದು, ಚಳಿಯಾಕೆಯ ನಿರ್ದಯ ಆಘಾತಗಳ ನಂತರ, ಇನ್ನಷ್ಟು ತೀವ್ರವಾಗಿದೆ. ಇಂಗ್ಲಂಡಿನ ಕೈಗೆ ಬರುವ ಹಣ, ಜನ, ವಸ್ತುಗಳನ್ನೆಲ್ಲ ಈಗ ಆ ದೇಶದಲ್ಲಿ ಗುಡ್ಡದಂತೆ ರಾಶಿ ಬಿದ್ದಿರುವ ತೊಂದರೆಗಳನ್ನು ಕಿತ್ತು ಸರಿಪಡಿಸುವದರಲ್ಲೆ ವಿನಿಯೋಗವಾಗುವದು. ಸಾಮ್ರಾಜ್ಯದ ದಿವಾಳಿಯೇಳಲಿಕ್ಕೂ ಇದೇ ಕಾರಣ. ಆ ಸಾಮ್ರಾಜ್ಯದಲ್ಲಿ ಬ್ರಿಟನ್ನಿನ ಸ್ಥಾನವನ್ನು ಯಾರ್ಯಾರೂ ತೆಗೆದುಕೊಳ್ಳಲಾರರು. ಹಿಂದಿನ ವಸಾಹತುಗಳು ಇನ್ನು ಮುಂದೆ ಬಾಳಲು ಸಾಯಲು, ಹೋರಲು ದುಡಿಯಲು ಪೂರ್ಣ ಸ್ವತಂತ್ರವಾಗುವವು. ೨೦ ನೆ ಶತಮಾನದ ಇತಿಹಾಸದಲ್ಲಿ ಇದೇ ಅತಿ ಪ್ರಚಂಡ ಘಟನೆ. ನಿಜವಾದ ದೊಡ್ಡ ಮನುಷ್ಯರು ಇದನ್ನು ಸರಿಯಾಗಿ ಅರಿತುಕೊಂಡು ವಿವೇಕ ದೂರದೃಷ್ಟಿ ಧೈರ್ಯಗಳಿಂದ ಮಾತ್ರವಲ್ಲ, ಎಚ್ಚರಿಕೆಯಿಂದ ವರ್ತಿಸುವರು.




### ಮಾದಯ್ಯ ಮತ್ತು ವೇಣು ಇವರ ಕೊನೆಯ ದಿನಗಳು

ಲೇ: ಭಾರತೀಸುತ, ಕೊಡಗು. ಪ್ರಕಾಶಕರು: ಲಲಿತ ಸಾಹಿತ್ಯ ಮಾಲೆ, ಧಾರವಾಡ. ೧೦೩ ಪುಟ, ಬೆಲೆ ರೂ. ೧/೮.

ಎರಡು ಬಗೆಯ ಪರೋಪಕಾರಿಗಳ ತ್ಯಾಗ ಜೀವನ ಇಲ್ಲಿ ರೇಖಿಸಲ್ಪಟ್ಟಿದೆ. ಹೋಟೆಲು ವೃತ್ತಿಯಿಂದ ಜೀವನ ಸಾಗಿಸುತ್ತಿದ್ದ ಮಾದಯ್ಯ ಮತ್ತು ಅವನ ಹೆಂಡತಿ ಮಂಜಮ್ಮ ರಾಷ್ಟ್ರೀಯ ಚಳವಳಿಯಲ್ಲಿ ತ್ಯಾಗಮಯ ಕಾರ್ಯ ಮಾಡುತ್ತಾರೆ. ನೆರೆ ಮನೆಯಿಂದ ಮರಳಿದ ಮಾದಯ್ಯ ರೈತರನ್ನು ಸಂಘಟಿಸುವ. ಬೆಳೆ ಹಾಳಾದರ್ಶ ಜಮೀನ್ದಾರರೂ ಸರಕಾರವೂ ರೈತರ ಮೇಲೆ ದಬ್ಬಾಳಿಕೆ ನಡೆಸಿದಾಗ ರೈತರು ಉದ್ರಿಕ್ತರಾಗಿ ಹಿಂಸಾಚಾರಕ್ಕಿಳಿಯುವರು. ಅದರಲ್ಲಿ ಅವರ ಮುಂದಾಳಾದ ಮಾದಯ್ಯನೇ ಆಹುತಿಯಾಗಿ ಅಹಿಂಸೆಯ ಗುಡಿಯನ್ನೆತ್ತಿ ಹಿಡಿಯುತ್ತಾನೆ.

ವೇಣು ಒಂದು ಬಗೆಯ ಹಿಂದೀ "ರಾಬಿನ್ ಹುಡ್." ಶ್ರೀಮಂತರನ್ನು ಸುಲಿದು ಬಡವರಿಗೆ ದಾನ ಮಾಡುವ. ಅಸಾಧಾರಣ ಕಳ್ಳ. ಕೊನೆಯ ಕಳ್ಳತನದ ಪ್ರಯತ್ನದಲ್ಲಿ ಪೋಲೀಸರ ಕೈಗೆ ಸಿಕ್ಕುಬೀಳಲಾದಾಗ ಆತ ಅಟ್ಟದಿಂದ ರಸ್ತೆಗೆ ಜಿಗಿದು ಬಿಡುವ. ಆಸ್ಪತ್ರೆಯಲ್ಲಿ ಅವನ ಅವಸಾನವಾಗುವದು.

ಈ ಎರಡು ಕಥೆಗಳಲ್ಲಿ ಮೊದಲನೆಯದರ ಆದರ್ಶ ಉನ್ನತವಾಗಿದ್ದರೂ ಎರಡನೆಯದೇ ಹೆಚ್ಚು ಪರಿಣಾಮಕಾರಿಯಾಗಿದೆಯೆನ್ನಬೇಕು. ಅಹಿಂಸಕ ಮಾದಯ್ಯನ ಹೃದಯಕ್ಕೆ ಓದುಗರಿಗೆ ದೊರೆಯುವ ಪ್ರವೇಶಕ್ಕಿಂತ ವೇಣುವಿನದಕ್ಕೆ ದೊರೆಯುವದು ಹೆಚ್ಚಾದುದೇ ಇದಕ್ಕೆ ಕಾರಣ. ಕಳ್ಳನ ಹೃದಯದ ಮೃದುತ್ವ, ಮಾನವ್ಯ ಅವನಲ್ಲಿ ನಮ್ಮ ತೀವ್ರ ಸಹಾನುಭೂತಿಯನ್ನುಂಟು ಮಾಡುತ್ತವೆ. ಆದರೆ ಮಾದಯ್ಯನ ಕೊನೆ ಹೆಚ್ಚು ಪರಿಣಾಮಕಾರಿಯಾಗಿದೆ.

ಪುಸ್ತಕ ಉತ್ತಮ ಕಲಾಕೃತಿಯೆನಿಸಲರ್ಹವಾಗಿಲ್ಲವಾದರೂ ಒಳ್ಳೆ ವಾಚನೀಯವಾಗಿದೆ.

### ವಿಧಿ ತಂದ ವಧು

ಮೂಲ: ಗುಡಿಪಾಟಿ ವೆಂಕಟಾಚಲಂ; ಅನುವಾದ: ಶ್ರೀ ಪಿ. ವೆಂಕೋಬಾಚಾರ್ಯ, ಪ್ರಕಾಶಕರು: ಸಂಜೀವಿನೀ ಪ್ರಕಾಶನ, ಹುಬ್ಬಳ್ಳಿ, ೧೪೪ ಪುಟ, ೧-೮-೦.

ಪಾಶ್ಚಾತ್ಯ ಸಂಸ್ಕೃತಿ, ನಡೆನುಡಿಗಳ ಮೊದಲ ಆಘಾತಕ್ಕೆ ಭಾರತೀಯ ಸಮಾಜದಲ್ಲಿ ಸ್ತ್ರೀಪುರುಷ ಸಂಬಂಧದ ವಿಷಯದಲ್ಲಿ ಆದ ವಿಚಾರ ಕ್ರಾಂತಿಯನ್ನು ಆಧಾರವಾಗಿಟ್ಟುಕೊಂಡು ತೆಲುಗಿನ ಪ್ರಸಿದ್ಧ ಸಾಹಿತಿ ಗುಡಿಪಾಟಿ ವೆಂಕಟಾಚಲಂ ಅವರು ಈ ಕಾದಂಬರಿಯನ್ನು ಬರೆದಿದ್ದಾರೆ. ಅಲೌಕಿಕ ಸುಂದರಿ ಪದ್ಮಾವತಿಗೂ ರಾಧಾನಿಗೂ ಬಾಲ್ಯದಲ್ಲಿಯೇ ಪ್ರೇಮ. ಆದರೆ ಪದ್ಮಾವತಿಯ ವಿವಾಹ ಬೇರೊಬ್ಬನೊಡನೆ ಆಗುತ್ತದೆ. ಪಾಶ್ಚಾತ್ಯ ವಿದ್ಯೆಯಿಂದ ವಿಚಾರಕ್ರಾಂತಿಗೊಳಗಾದ ಅವರಿಬ್ಬರೂ ವಿವಾಹಬಾಹ್ಯ ಪ್ರೇಮದಲ್ಲಿ ಸಿಗಿಬೀಳುತ್ತಾರೆ. ಅವನೊಂದು ಪಾಪವೆಂದು ಗಣಿಸುವದೂ ಇಲ್ಲ. ಸ್ವಾಮಿತ್ವಾಪೇಕ್ಷಿ ರಾಧಾಗೆ ಅವಳನ್ನು "ಪಾರಿಸಿಕೊಂಡು" ಹೋಗಿ ಕೊನೆವರೆಗೂ ತನ್ನವಳನ್ನಾಗಿ ಮಾಡಿಕೊಳ್ಳುವ ಹಂಬಲ. ಅವಳನ್ನು ಸಂತೋಷಗೊಳಿಸುವ ಗೋಸುಗ ಅವನು ಕೀರ್ತಿಕಾಮಿಯಾಗಿ ಸಮಾಜಸೇವೆಯಿಂದ ಹೆಸರಾಗುತ್ತಾನೆ. ಆದರೆ ಪದ್ಮಾವತಿಗೆ ಅವನಲ್ಲಿ ಅನನ್ಯ ಪ್ರೇಮವಿದ್ದರೂ ಅವನೊಡನೆ ಓಡಿಹೋಗಿ ಬಡತನದ ಕೋಟಲೆಗೆ ಗುರಿಯಾಗುವ ಮನಸಿಲ್ಲ. ಮದುವೆಯಾದ ಗಂಡನ ಸಿರಿಸಂಪತ್ತಿನಿಂದ ತನ್ನ ಸೌಂದರ್ಯವನ್ನು ಚಿರಂತನವಾಗಿಟ್ಟುಕೊಂಡು ಇತ್ತ ವಿವಾಹಾತೀತ ಪ್ರೇಮದಲ್ಲಿ ರಾಧಾನೊಡನೆ ನಲಿಯುವದರಿಂದ ಎರಡು ಧ್ರುವಗಳನ್ನು ಸೇರಿಸಬಹುದೆಂದು ಅವಳ ವಾದ. ಈ ನಾಟಕದಲ್ಲಿ ಕೊನೆಗೆ ಅವಳ ಕಣ್ಣಂಜು ಹರಿದು ಅತ್ಯಂತ ಯಾತನಾಮಯ ಜೀವನವನ್ನು ಆತ್ಮಹತ್ಯೆಯಿಂದ ಕೊನೆಗೊಳಿಸಬೇಕಾಯಿತು. ಇದರಲ್ಲಿ ದೈಹಿಕ ಸಂಬಂಧಕ್ಕಿಂತಲೂ ಮಾನಸಿಕ ಸಮಸ್ಯೆಯೆ ಹಿರಿಯದು. ಈ ಸಮಸ್ಯಾತ್ಮಕ ವಸ್ತುವನ್ನು ಲೇಖಕರು ಉತ್ಕೃಷ್ಟವಾಗಿ ನಿರೂಪಿಸಿದ್ದಾರೆ. ಇದು ಕನ್ನಡಕ್ಕೆ ಅನುವಾದಗೊಂಡುದಕ್ಕೆ ದುಃಖಪಡಬೇಕಾಗಿಲ್ಲ.

ಆದರೆ ಈ ಪುಸ್ತಕದೊಡನೆ ಕನ್ನಡ ಸಾಹಿತ್ಯ ರಂಗದಲ್ಲಿ ಕಾಲಿಟ್ಟ ಅನುವಾದಕರು ಮತ್ತು ಅವರೊಡನೆ ಸಂಜೀವಿನೀ ಪ್ರಕಾಶನದ ಸಂಪಾದಕರು ಹಸ್ತ ಪ್ರತಿಯನ್ನಾಗಲಿ ಮುದ್ರಕನ ಕರಡನ್ನಾಗಲಿ ಸ್ವಲ್ಪವೂ ಎಚ್ಚರಿಕೆಯಿಂದ ತಿದ್ದಿದಂತೆ ಕಾಣುವದಿಲ್ಲ. ಅದರಿಂದ ಪುಸ್ತಕ, ಮುದ್ರಣದೋಷಗಳ ಹೊರಳಕನದಲ್ಲಿ ಹಿಂದಿನ ಎಲ್ಲ ದಾಖಲೆಗಳನ್ನು ಮುರಿದಿದೆ. ಅಲ್ಲದೆ ಅನೇಕ ಶಬ್ದ, ವಾಕ್ಯದೋಷಗಳೂ ತಲೆಯೆತ್ತಿ ನಿಂತಿವೆ. ಈ ವಿಷಯ ಅವಶ್ಯವಿದ್ದಷ್ಟು ಎಚ್ಚರ ವಹಿಸಿದ್ದರೆ ಅನುವಾದ ತೃಪ್ತಿಕರವಾಗುತಿತ್ತು.

### ಎರಡು ಸೆಳೆತ

ಮೂಲ:— ಶ್ರೀ ಚಾರು ಬಂದೋಪಾಧ್ಯಾಯ. ಅನುವಾದಕರು: ಶ್ರೀ ಮೇವುಂಡಿ ಮಲ್ಲಾರಿ. ಪ್ರಕಾಶಕರು: ಪ್ರತಿಭಾ ಗ್ರಂಥಮಾಲೆ, ಧಾರವಾಡ. ೧೪೪ ಪುಟ ಬೆಲೆ ೧—೧೨—೦.

ಸ್ತ್ರೀ ಚರಿತ್ರದ ವೈಚಿತ್ರ್ಯವನ್ನು ಬಿಡಿಸಿ ತೋರಿಸುವ ಈ ಪುಟ್ಟ ಕಾದಂಬರಿ ತುಂಬ ವಾಚನೀಯವಾಗಿದೆ. ಸ್ತ್ರೀಯ ಪ್ರಣಯದಲ್ಲಿ ಎರಡು ಮುಖ: ಒಂದು, ಸ್ವಾಭಾವಿಕ ಒಲವು ಸಮವಯಸ್ಕ, ಸುರೂಪ ಪುರುಷನಲ್ಲಿ ಮನ ನೆಡುವದು, ಇನ್ನೊಂದು, ಉನ್ನತ ಚರಿತ್ರನಾದವನಲ್ಲಿ, ಧೀರೋದಾತ್ತನಲ್ಲಿ ಮಗ್ನವಾಗುವ ಪ್ರವೃತ್ತಿ. ಇಂಥ ಇಮ್ಮಡಿ ಸೆಳೆತಕ್ಕೆ ಸಿಕ್ಕ ಸ್ತ್ರೀಯ ಕೊನೆ ಸಾಮಾನ್ಯವಾಗಿ ದುರಂತವೆ ಆಗುವಂತೆ ಈ ಕಥೆಯಲ್ಲಿಯೂ ಆಗಿದೆ. ಬಾಲವಿಧವೆ ಹೈಮವತಿ ಅನುರೂಪ ತರಲನಲ್ಲಿ ಅನುರಕ್ತಳು. ವಿವಾಹಕ್ಕೆ ಅವಳ ತಂದೆಯ ಸಮ್ಮತಿ ದೊರೆಯದಿರಲು ಅವರಿಬ್ಬರು ಓಡಿಹೋಗಲು ಹವಣಿಸುವರು. ಆದರೆ ರೇಲ್ವೆ ಅಪಘಾತಕ್ಕೆ ತರಲ ಸಿಲುಕಿ ಸತ್ತನೆಂದು ಭಾವಿಸಲ್ಪಡುವ. ಗರ್ಭಿಣಿಯಾಗಿದ್ದ ಅವಳ ಮಾನರಕ್ಷಣೆಗೆ ಧೀರಚರಿತ್ರನಾದ ಗೋವರ್ಧನ ಸಿದ್ಧನಾಗಿ ಅವಳನ್ನು ಕಲಕತ್ತೆಗೆ ಒಯ್ದು ಹೆಸರಿಗೆ ಮದುವೆಯಾಗುವ. ಅವನ ಚಾರಿತ್ರ್ಯದಿಂದ ಆಕೃಷ್ಟಳಾದ ಹೈಮವತಿ ನಿಜವಾದ ಅನುರಾಗ ತೋರಿಸಲನುವಾದಾಗ ತರಲ ಮತ್ತೆ ರಂಗದಲ್ಲಿ ಪ್ರವೇಶಿಸುವ. ಒಬ್ಬಳೇ ಸ್ತ್ರೀಯಲ್ಲಿ ಇಬ್ಬರು ಪುರುಷರು ಅನುರಕ್ತರಾದಾಗಿನ ವೈಷಮ್ಯ ಗಾಢವಾಗಿ, ಗೋವರ್ಧನ ಪ್ರಣಯಿಗಳ ಹಾದಿ ಸುಗಮ ಮಾಡಲು ಆತ್ಮಹತ್ಯೆಯ ನಿರ್ಧಾರ ಮಾಡಿದಾಗ ಹೈಮವತಿ ತಾನೇ ಇಹಲೋಕ ವ್ಯಾಪಾರ ಮುಗಿಸಿ ಬಿಡುವಳು. ಪಾತ್ರಗಳ ಮನೋವ್ಯಾಪಾರ, ಚರಿತ್ರ ವೈಶಿಷ್ಟ್ಯ ಚನ್ನಾಗಿ ಮೂಡಿದೆ. ಅನುವಾದ ತೃಪ್ತಿಕರವಾಗಿದೆ.

### ಮಾತ್ರೆಗಳು

ಲೇ: ಬೀಚಿ, ಬಳ್ಳಾರಿ. ಪ್ರಕಾಶಕರು ಸಮಾಜ ಪುಸ್ತಕಾಲಯ, ಧಾರವಾಡ. ೩೮ ಪುಟ, ಬೆಲೆ ೧೨ ಆಣೆ.

ಇದರಲ್ಲಿರುವ ೩೨ ಚುಟುಕು ಕಥೆಗಳಲ್ಲಿ ಲೇಖಕರು ಸಮಾಜದಲ್ಲಿರುವ ದೋಷಗಳ ಮೇಲೂ ಜನರ ಡಂಭಾಚಾರದ ಮೇಲೂ ಹರಿತವಾದ ಟೀಕಾಸ್ತ್ರವನ್ನು ಎಸೆದಿದ್ದಾರೆ. ವಿಡಂಬನೆಯೇ ಅವರ ಟೀಕೆಯ ಮುಖ್ಯ ತಂತ್ರ. ಅದರಲ್ಲಿ ಅವರು ತಕ್ಕಷ್ಟು ಯಶಸ್ವಿಯಾಗಿದ್ದಾರೆ.

### ದಾದಿ ಪನ್ನೆ

ಲೇ: ಶ್ರೀ ರಾಘವ. ಪ್ರಕಾಶಕರು ಸತ್ಯಶೋಧನ ಪ್ರಕಟನ ಮಂದಿರ, ಬೆಂಗಳೂರು. ಬೆಲೆ: ೦-೩-೦.

ಪನ್ನಾದಾಸಿಯ ಅಪ್ರತಿಮ ತ್ಯಾಗದ ಕಥೆಯನ್ನು ತ್ರಿಪುಟಿ ತಾಳದ ಛಂದಸ್ಸಿನಲ್ಲಿ ಮಕ್ಕಳಿಗೆ ಒಗ್ಗುವಂತೆ ಲೇಖಕರು ಬರೆದಿದ್ದಾರೆ. ಶಾಲೆಯ ಮಕ್ಕಳಿಗೆ ಉಪಯುಕ್ತವಾದ ಪುಸ್ತಕ.

### ಚಟಾಕಿ

ಲೇ: ಶ್ರೀ ಎಲ್. ಗುಂಡಪ್ಪ. ಪ್ರಕಾಶಕರು: ಕಾವ್ಯಾಲಯ, ಮೈಸೂರು. ಬೆಲೆ: ೦—೬—೦.

ಮಕ್ಕಳಿಗೆ ರಚಿಸುವ ಚಿಕ್ಕ ಚಿಕ್ಕ ಕವನಗಳ ಸಂಗ್ರಹವಿದು. ರಾ. ವೆಂ. ಶ್ರೀನಿವಾಸರ ಚಿತ್ರಗಳು. ಹುಡುಗರಿಗೆ ಇದನ್ನು ಹೆಚ್ಚು ರುಚಿಸುವಂತೆ ಮಾಡಿವೆ.

### Our Heritage

by Humayun Kabir. Publishers, The National Information & Publications Ltd. 74 Laxmi Building Bombay 134 pp. Rs. 4

ಹಿಂದೀ ಸಂಸ್ಕೃತಿಯ ವೈಶಿಷ್ಟ್ಯವೆಂದರೆ ಅದರ ಪರಸಹಿಷ್ಣುತೆ, ಎಲ್ಲವನ್ನು ಒಳಗೊಳ್ಳಬಲ್ಲ ಸಾಗರದಂಥ ವಿಶಾಲತೆ. ಈ ಪುಸ್ತಕದಲ್ಲಿರುವ ಮೂರು ನಿಬಂಧಗಳಲ್ಲಿ ಪ್ರಸಿದ್ಧ ಇಂಗ್ಲೀಷ ಮತ್ತು ಬಂಗಾಲಿ ಲೇಖಕರಾದ ಪ್ರೊ. ಹುಮಾಯೂನ ಕಬೀರರು ಹಿಂದೀ ಸಂಸ್ಕೃತಿಯ ಈ ಸದ್ಗುಣದ ಮೇಲೆ ಒಳ್ಳೆ ಬೆಳಕು ಚಲ್ಲಿದ್ದಾರೆ. ಆರ್ಯ ಕಾಲದಿಂದ ಮುಸ್ಲಿಂ ಆಳಿಕೆಯ ಅಂತ್ಯದವರೆಗೆ ಈ ಮಹಾ ಮಾನವಸಾಗರದಲ್ಲಿ ಹೇಗೆ ಅನೇಕ ಸಂಪ್ರದಾಯ, ಸಂಸ್ಕೃತಿ, ನಾಗರಿಕತೆಗಳು ಸಮಾವೇಶ ಹೊಂದಿದವು ಮತ್ತು ಅಡಿಗಡಿಗೆ ಹೊಸ ಹೊನಲುಗಳು ಬಂದು ಕೂಡಿದರೂ ಆ ಪ್ರಾಚೀನ ಸಂಸ್ಕೃತಿಯ ಮೂಲ ತತ್ವಗಳು ಹೇಗೆ ಬದಲಾಗಲಿಲ್ಲ ಎಂಬುದನ್ನು ಮನೋಹರವಾಗಿ ಪ್ರತಿಪಾದಿಸಲಾಗಿದೆ. ಪ್ರಾಚೀನತಮ ಸಂಸ್ಕೃತಿಗಳಲ್ಲಿ ಹಿಂದುಸ್ತಾನದ್ದೊಂದು. ಅದರ ಸಮಕಾಲೀನ ಸಂಸ್ಕೃತಿಗಳಲ್ಲಿ— ಚೀನದ್ದೊಂದನ್ನು ಬಿಟ್ಟರೆ— ಮತ್ತಾವುದೂ ಇದರಂತೆ ಚಿರಂತನವಾಗಿ ಬಾಳಲಿಲ್ಲ. ಅವೆಲ್ಲ ಬರಿ ಹಳೆಗಾಲದ ಕಥೆಗಳಾಗಿಬಿಟ್ಟಿವೆ. ಹಿಂದುಸ್ತಾನದ್ದೊಂದೇ ಅವ್ಯಯವಾಗಿ, ಸರ್ವಂಕಷವಾಗಿ, ನಿರರ್ಗಳವಾಗಿ ಉಳಿದಿದೆ. ಇಲ್ಲಿ ಬಂದ ಮುಸ್ಲಿಂ ಮತ್ತು ಕ್ರಿಶ್ಚಿಯನ್ ದಂಡಯಾತ್ರೆಗಳು ಕೂಡ ಹಿಂದುಸ್ತಾನದ ಈ ದುರ್ವಾರ ವಿಸ್ತಾರದಲ್ಲಿ ಲೀನವಾಗಿ ಹೋಗಿ ರೂಪು ಬದಲಿಸಿವೆ. ವೈವಿಧ್ಯದಲ್ಲಿ ಐಕ್ಯವೇ ಹಿಂದುಸ್ತಾನದ ಮುಖ್ಯ ಲಕ್ಷಣ

ಪ್ರೊ. ಕಬೀರರ ಈ ಪೃಥಕ್ಕರಣ ಸತ್ಯವಾಗಿದೆ ಮಾತ್ರವಲ್ಲ, ಪ್ರತಿಯಲ್ಲಿ ಅಪಶ್ರುತಿಯೆತ್ತುತ್ತಿರುವ ಹಿಂದೀ ಐಕ್ಯ ವಿರೋಧಿಗಳ ಪ್ರಸ್ಥ ಬೆಳೆದ ಈ ಕಾಲದಲ್ಲಿ ಅತಿ ಸಕಾಲಿಕವೂ ಆಗಿದೆ. ಮುಸ್ಲಿಮರೊಬ್ಬರು ಇದನ್ನು ಬರೆದುದರಿಂದ ಅದರ ಬೆಲೆ ಹೆಚ್ಚಾಗಿದೆ. ಹಿಂದೂ ಸಂಪ್ರದಾಯದ ಗುಣಾವಗುಣಗಳನ್ನು ತುಂಬ ಇಂಗಿತಜ್ಞತೆಯಿಂದ ಕಬೀರ ಸಾಹೇಬರು ಕಂಡು ಹಿಡಿದಿದ್ದಾರೆ. ಹಿಂದುಸ್ತಾನದ ಭವಿತವ್ಯತೆಯಲ್ಲಿ ಅವರಿಗಿರುವ ವಿಶ್ವಾಸವೂ ಶ್ಲಾಘ್ಯವಾಗಿದೆ.

ಸರಲ ಸುಂದರ ಶೈಲಿಯಲ್ಲಿ ಬರೆದ ಪುಸ್ತಕವನ್ನೋದುವಾಗ ಒಂದು ಮನೋರಂಜಕ ಕಥೆಯನ್ನೋದಿದಂತಾಗುತ್ತದೆ. ಮುಸ್ಲಿಂ ಧರ್ಮದಿಂದ ಶಂಕರಾಚಾರ್ಯರ ಮೇಲೆ ಪರಿಣಾಮವಾಗಿರಬಹುದು ಎಂಬೀ ಕೆಲವು ಅವರ ಊಹೆಗಳು ವಿವಾದಾಸ್ಪದವಾಗಿರಬಹುದು. ಆದರೂ ಈ ನಿಬಂಧಗಳಿಂದ ಹಿಂದೀ ಸಂಸ್ಕೃತಿಯ ಶಕ್ತಿ ಮತ್ತು ಮಹತಿಯ ಅರಿವು ಬರುವದರಲ್ಲಿ ಸಂದೇಹವಿಲ್ಲ. ಇದಕ್ಕಾಗಿ ಶ್ರೀ ಕಬೀರರು ಅಭಿನಂದನಾರ್ಹರೇ ಸರಿ..

### ಆಶೆ

ನೀರಿನೆದುರು ಕುಮರಿಯೊಂದು ಕಣ್ಣನೀರ
ಮಿಡಿಯುತಿತ್ತು
ನೀರಿದಂತ ದುಃಖವಿತ್ತು; ಮೊರೆಯಿಡಲ್ಕೆ
ಬಾರದಿತ್ತು !

ಮಿತ್ರದಿಟ್ಟ ವೈಯನೆಲ್ಲ ಚುಚ್ಚುತಿತ್ತು
ಮೋರೆಯೊಣಗಿ ನಿಡುಸರವನು ಬೀರುತಿತ್ತು
ದುಡಿದ ಮೋರೆ ಬಳಲಿ ಬೆಂಡತೋರುತಿತ್ತು
ಮನದ ಭಾವ ಮೋರೆಯಲ್ಲಿ ಕಾಣುತಿತ್ತು
ಪಶುತೆಯನ್ನು ಹಳಿಯುತಿತ್ತು;
ಮನುಜನನ್ನು ಹಿಗ್ಗುತಿತ್ತು !

ಮನುಜ ಜನುಮವನ್ನು ತಾಳಿ
ಜನತೆಯೊಳಗೆ ರುಚಿಯ ನೋಡಿ
ನರರ ಹೆಗಲ ಮೇಲೆ ಕುಳಿತು
ಪರರ ರಕುತವನ್ನು ಹೀರಿ
ತನುವ ತಂಪು ಮಾಡಲೆಂದು
ಹಿರಿಯ ಬಯಕೆ ಬಯಸುತಿತ್ತು !

ಜೀವನದಲಿ ಏರು ಇಳಿವು ಜಗದೊಳೆಲ್ಲ
ವ್ಯಾಪಿಸಿಹುದು
ಮನುಜನೇನು ? ಪಶುವದೇನು ? ಬಾಳಿನಲ್ಲಿ
ಸಮತೆಯಿಹುದು
ತನ್ನ ಸುಖವ ತಾನು ಬಯಸ ಕುದುರೆಗಿದು
ರಹಸ್ಯವತ್ತೆ !
ರಕುತ ತೆತ್ತ ಪಶುಗಳೆಲ್ಲ ಮನುಜರಾಗ
ಲಿಚ್ಛಿಸುವವು
ಜೀವನದಲಿ ನೊಂದ ನರರು ಪಶುಗಳಾಗ
ಲೆಳಸುತಿಹರು !

—ಮತ್ತಿಹಳ್ಳಿ ಮೂ...



### ಚಂದಾದಾರರಿಗೆ ಸೂಚನೆ

ಮೂರು ತಿಂಗಳಿಗೆ ಅಥವಾ ಕಡಿಮೆ ಮುದತಿಗೆ ವ್ಹಿ. ಪಿ. ಕಳಿಸುವದಿಲ್ಲ. ಮುಂಗಡ ಹಣ ಕಳಿಸಬೇಕು. ಅಂಚೆಯ ಅವ್ಯವಸ್ಥೆಯಿಂದ ಪತ್ರಿಕೆ ತಲ್ಪದಿದ್ದರೆ ನಾವು ಹೊಣೆಯಲ್ಲ. ಅವಧಿ ಮುಗಿಯುವದೆಂಬದನ್ನು ನೀವೇ ನೆನಪಿಟ್ಟು ಹಣ ಕಳಿಸಬೇಕು. ಯೋಗ್ಯ ವೇಳೆಗೆ ಹಣ ಬರದಿದ್ದರೆ ಏನನ್ನು ತಿಳಿಸದೆ ಪತ್ರಿಕೆ ನಿಲ್ಲಿಸಲಾಗುವದು.

ವ್ಯವಸ್ಥಾಪಕ.

No. B. 3148 | LICENCE No. 3 Licence to Post without Prepayment | Karmaveer 3-3-47




ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಮಾರ್ಚ ೩ ರಿಂದ ೯ ರ ವರೆಗೆ

## ಮೇಷ

ಪ್ರಕೃತಿ ಉತ್ತಮ. ಸ್ತ್ರೀಸುಖ ಮನಸಿನಂತೆ. ಮಕ್ಕಳಲ್ಲಿ ಕೆಲಜನರ ಉನ್ನತಿ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ. ಬಹಳ ಉನ್ನತಿ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಬಹಳ ಉತ್ತಮ ಆದರೆ ನಿರರ್ಥಕ ವೆಚ್ಚವೂ ವಿಪರೀತ ಮಿತ್ರತ್ವದಲ್ಲಿ ಬಹಳ ವಿರೋಧ. ಆಪ್ತರು ಮತ್ತು ಆಶ್ರಿತರಿಂದ ಬೆದರಿಕೆ ಮತ್ತು ಪುಂಡತನದ ಭಾಷೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಯಶಸ್ಸು ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರವೂ ಅನುಕೂಲ. ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೩, ೬, ೭ ಅನುಕೂಲ.

## ವೃಷಭ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಉತ್ತಮ ಆದರೆ ನಿಮ್ಮ-ನಿಮ್ಮಲ್ಲಿ ಒಂದು ಕ್ಷಣ ಪ್ರೇಮವಿದ್ದರೆ ಮತ್ತೊಂದು ಕ್ಷಣದಲ್ಲಿ ತೀವ್ರವಿರೋಧ ಇಂಥ ಪ್ರಸಂಗ ಒಂದರ ಹಿಂದೊಂದು. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಬಹಳ ಉತ್ತಮ ದೊರೆತರೂ ಮಕ್ಕಳಲ್ಲಿ ಕೆಲ ಜನರಿಂದ ಸಂಭವಿಸುವ ಹೊಣೆಗೆಟ್ಟ ವರ್ತನಗಳಿಂದ ಬಹಳ ಮಾನಸಿಕ ತೊಂದರೆ ಆಗುವದೆ ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಒಳ್ಳೆ ಜೋರಿನಲ್ಲಿ ಆದರೆ ಮನಸಿನ ವಿರುದ್ಧ ವೆಚ್ಚ ಮಾಡುವ ಪ್ರಸಂಗವೂ ದತ್ತ ಎಂದು ಮುಂದೆ ನಿಲ್ಲುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಮಿತ್ರರು ಕಲ್ಪನಾತೀತ ಸಹಾಯ ಮಾಡುವರು. ಬಹಳ ದೂರದ ಮತ್ತು ಸುಖಕರ ಪ್ರವಾಸ ಭೆಟ್ಟಿಗಿಂತ ಪತ್ರವ್ಯವಹಾರ ಹೆಚ್ಚು ಹಿತದ್ದು. ಕೃತ್ತಿಕೆಯ ಕೊನೆಯ ೩ ಮತ್ತು ರೋಹಿಣಿಯ ಮೊದಲನೆ ೩ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೩, ೪, ೫, ೮ ಅನುಕೂಲ.

## ಮಿಥುನ

ಪ್ರಕೃತಿ ನಿಮ್ಮದು ಅನುಕೂಲ. ಆದರೆ ಹೆಂಡತಿಯದು ಕೆಡುವ ಅಂಜಿಕೆ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅಸ್ಪಷ್ಟ. ಪ್ರತಿಯೊಂದು ಕೆಲಸದಲ್ಲಿ ಮನೆಯಲ್ಲಿಯ ಪ್ರತಿಯೊಬ್ಬರಲ್ಲಿ ಭಿನ್ನ ಭಿನ್ನ ವಿಚಾರವುಂಟಾಗುವದರಿಂದ ಎಲ್ಲ ಕೆಲಸಗಳೂ ಅರ್ಧಮರ್ಧ ಸ್ಥಿತಿಯಲ್ಲಿ ಉಳಿದುಬಿಡುವ ಯೋಗ. ಉದ್ಯೋಗದಲ್ಲಿ ಲಾಭ ತುಂಬ ಆದರೆ ಪ್ರತಿಷ್ಠೆ ಮತ್ತು ಪ್ರಗತಿಯವಿಷಯದಲ್ಲಿ ಎರಡನೆಯವರ ಬೊಗಸೆಯಿಂ ನೀರು ಕುಡಿಯುವ ಪ್ರಸಂಗ. ಮಿತ್ರ ಸುಖ ಉತ್ತಮ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಪ್ರತಿಪಕ್ಷಿಗಳ ಹಾನಿ ಒಂದು ಪಟ್ಟು ಆದರೆ ನಿಮ್ಮದು ನಾಲ್ಕುಪಟ್ಟು ಹಾನಿ. ನಿಮ್ಮ ಮಹತ್ವಾಂತರ ಆತ್ಮರಲ್ಲಿ ಗೊತ್ತುಪಡಿಸಿದ ಕೆಲ ಶುಭ ಕಾರ್ಯಗಳಲ್ಲಿ ಅನಪೇಕ್ಷಿತ ಅಡಚಣಿ ಬಂದ ಬಹಳ ಮನೋಭಂಗ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ ಆರಿದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೩, ೬, ೭ ಅನುಕೂಲ.

## ಕರ್ಕ

ನಿಮ್ಮ ಮತ್ತು ಹೆಂಡತಿಯ ಆರೋಗ್ಯ ಸ್ವಲ್ಪ ಕೆಡುವದು. ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸರಾಸರಿ ಅನುಕೂಲ ಉದ್ಯೋಗದಲ್ಲಿ ಪ್ರತಿಷ್ಠೆ ಕಡಮೆಯೆ ಆದರೆ ಪ್ರಗತಿ ಮತ್ತು ಲಾಭ ಮನಸೋಕ್ತ ಆಗುವದಲ್ಲದೆ ಸ್ವಲ್ಪ ಅವಚಿತ ಲಾಭದ ಸಂಭವವೂ ಇದೆ. ಮಿತ್ರ ಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಮಾತ್ರ ಪ್ರತಿಪಕ್ಷಿಗಳದೇ ಮೇಲುಗೈ. ಪುಣ್ಯವ್ಯಕ್ತಿಯ ಇಲ್ಲವೆ ಅಂಥ ಸ್ಥಳಗಳ ದರ್ಶನ. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೪, ೫, ೩ ಅನುಕೂಲ.

## ಸಿಂಹ

ಹೆಂಡತಿಗೆ ಕ್ಲೇಶ ಮತ್ತು ಅವಳೊಡನೆ ಪ್ರತಿದಿನವೂ ವಿರೋಧ. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ಸಮಾಧಾನ ಕಡಮೆಯೆ. ಅಪ್ತರಗೂಡ ಶಿಕ್ಕಾಟವುಂಟಾಗುವ ಪ್ರಸಂಗ ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭವೂ ಅನುಕೂಲ ಆದರೆ ಪ್ರತಿಷ್ಠೆಯ ಬದಲು ಅಪ್ರತಿಷ್ಠೆಯ ಅಂಜಿಕೆ ಬಹಳ ಮಿತ್ರಸುಖ ಉತ್ತಮ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಮಾತ್ರ ಶತ್ರುಗಳಿಂದಲೂ ಶತ್ರುಹಿ ಭಗವಾನ್ ಆಗುವಷ್ಟು ಶಕ್ತಿ ಬರುವ ಅಂಜಿಕೆ. ಸಣ್ಣ ದೊಡ್ಡ ಕೊಡಕೊಳ್ಳುವವರ ಕಿರಕಳ ತಗಾದಿ. ಪ್ರವಾಸ ಮತ್ತು ಪತ್ರವ್ಯವಹಾರವೂ ಭೆಟ್ಟಿಗಿಂತ ಅನುಕೂಲ. ಮಘಾದ ಕೊನೆಯ ೩ ಮತ್ತು ಪೂರ್ವಾದ ಮೊದಲನೆ ೩ ಚರಣಗಳಿಗೆ ಮಾತ್ರ ತೊಂದರೆ ಕಡಮೆ. ತಾ. ೬, ೭, ೮ ಅನುಕೂಲ.

## ಕನ್ಯಾ

ಪ್ರಕೃತಿ ಕೆಡುವದು ಆದರೆ ಬಹುತರ ವಿಷಯದಲ್ಲಿ ಪ್ರಾಪಂಚಿಕ ಸುಖ ಮನಸಿನಂತೆ. ಉದ್ಯೋಗದಲ್ಲಿ ಪ್ರಗತಿ ಉತ್ತಮ. ಆದರೆ ಪ್ರತಿಷ್ಠೆ ಮತ್ತು ಲಾಭ ಸಾಧಾರಣವೆ. ಆದರೆ ಉದ್ಯೋಗ ಧಂದೆಯವರಿಗಿಂತ ನೋಕರದಾರರಿಗೆ ಬಹಳ ಹಿತದ ಸಂಗತಿಗಳು ಸಂಭವಿಸುವ ವಾರ ಇದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು ಆದರೆ ನಿಮ್ಮ ಮೂರ್ಖತನದಿಂದಲೆ ಮಳೆಯ ನೀರನ್ನು ಬಿಟ್ಟು ಮಂಜಿನ ನೀರಿಗೆ ಕೈಯೊಡ್ಡುವ ಪ್ರಸಂಗ ಬರುವದು. ಮಿತ್ರತ್ವದಲ್ಲಿ ಕಿಂಚಿತ್ ವಿರೋಧ. ಸ್ತ್ರೀ ಸಹವಾಸ ಮತ್ತು ಉಳಿದ ಮನೋರಂಜಕ ಮಾತುಗಳಲ್ಲಿ ಅತಿಲಕ್ಷ. ಪ್ರವಾಸ ಸುಖಕರ ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಬಹಳ ತೊಂದರೆ ಕೊಡುವಂತಹದು. ಉತ್ತರಾದ ಕೊನೆಯ ೩ ಮತ್ತು ಹಸ್ತಾದ ಮೊದಲನೆ ೩ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು ತಾ. ೩, ೪, ೮, ೯ ಅನುಕೂಲ.

## ತುಲಾ

ಪ್ರಕೃತಿ ಅನುಕೂಲ. ಸ್ತ್ರೀ ಸುಖವೂ ಉತ್ತಮ ಆದರೆ ಮಕ್ಕಳಿಂದ ಕಿರಕಳ ಉಪದ್ರವದ ಕೃತ್ಯಗಳು ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅನುಕೂಲ. ಬಗೆಬಗೆಯ ಮಿಷ್ಟಾನ್ನ ಮತ್ತು ಉಚ್ಚ ವಾಹನಗಳ ಉಪಯೋಗ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ ಆದರೆ ಪ್ರತಿಷ್ಠೆ ಸಾಧಾರಣವೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಅಷ್ಟೇ ಜೋರು. ಮಿತ್ರ ಸುಖ ಉತ್ತಮ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಸ್ವಾತಿಯ ಕೊನೆಯ ೩ ಮತ್ತು ವಿಶಾಖಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೩—೬—೭ ಅನುಕೂಲ.

## ವೃಶ್ಚಿಕ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಸಾಧಾರಣ ಆದರೆ ಸ್ತ್ರೀ ಸುಖ ಮನಸಿನಂತೆ. ಉದ್ಯೋಗದಲ್ಲಿ ಪ್ರಗತಿ ಕಡಮೆ. ಲಾಭದಲ್ಲಿ ಆಯುತ್ತ ಹೊತ್ತಿನಲ್ಲಿ ಕೆಲ ಅಡಚಣಿಗಳು ಬರುವದರಿಂದ ಮನೋಭಂಗ ಆದರೆ ಪ್ರತಿಷ್ಠೆ ಕತೆಯ ದೊಡ್ಡ ಅಬ್ಬರ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು ಆದರೆ ಗುಪ್ತ ಶತ್ರುಗಳಿಂದ ಸ್ವಲ್ಪ ಗೊಂದಲ ಮತ್ತು ಅವಮಾನ ಗೋಸುವ ಯತ್ನ ನಡೆದುದೆ ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಅನುರಾಧೆಯ ಕೊನೆಯ ೩ ಮತ್ತು ಜೇಷ್ಠಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೪, ೫, ೬, ೭, ಅನುಕೂಲ.

## ಧನು

ಬಗೆಬಗೆಯ ಕಷ್ಟಕರ ಕೆಲಸದ ಗೊಂದಲದಿಂದ ಪ್ರಕೃತಿಯಲ್ಲಿ ಕುರಕುರಿ. ಆದರೆ ಹೆಂಡತಿ ಮತ್ತು ಮಕ್ಕಳ ಪ್ರಾಪಂಚಿಕ ಸುಖ ಅನುಕೂಲ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಹೆಚ್ಚು. ಆದರೆ ಪ್ರತಿಷ್ಠೆ ಸಾಧಾರಣವೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವೆಚ್ಚ ಮತ್ತು ತೊಂದರೆ ಹೆಚ್ಚು ಆದರೆ ಕೊನೆಗೆ ಯಶಸ್ಸು ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ ಮೂಲಾದ ಕೊನೆಯ ೩ ಮತ್ತು ಪೂರ್ವಾಷಾಢಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೩, ೬, ೭, ೮ ಅನುಕೂಲ,

## ಮಕರ

ಪ್ರಕೃತಿ ಉತ್ತಮ ಆದರೆ ಸ್ತ್ರೀ ಸುಖದಲ್ಲಿ ಬಹಳ ವಿರಸ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಹಿತದ್ದು. ಉದ್ಯೋಗದಲ್ಲಿ ಪ್ರಗತಿ ಸಾಧಾರಣವೆ. ಆದರೆ ಪ್ರತಿಷ್ಠೆ ಮತ್ತು ಲಾಭ ತುಂಬ ಪ್ರತಿಯೊಂದು ಕೆಲಸದಲ್ಲಿ ಪರಿಚಿತರಿಗಿಂತ ಅಪರಿಚಿತರಿಂದಲೆ ಅನಪೇಕ್ಷಿತ ರೀತಿಯಿಂದ ಮೋಸ ಹೋಗುವಂತೆ ಪೇಚ ಹಾಕಲಾಗುವದು ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಉತ್ತರಾಷಾಢಾದ ಕೊನೆಯ ೩ ಮತ್ತು ಶ್ರವಣಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೪, ೫, ೮, ೯, ಅನುಕೂಲ.

## ಕುಂಭ

ಪ್ರಕೃತಿ ಸಾಧಾರಣವೆ. ಸ್ತ್ರೀ ಸುಖ ಅನುಕೂಲ ಆದರೆ ಮನೆಯಲ್ಲಿಯ ಅನ್ಯ ಸ್ತ್ರೀಯೊಡನೆ ತೀವ್ರ ವಿರೋಧ ಆಪ್ತರಿಂದ ಅದರ ಬಗ್ಗೆ ದ ಲೌಕಿಕವಾಗ ವಂಥ ಬೀಜ ಬಿತ್ತುವದು. ಉದ್ಯೋಗದಲ್ಲಿ ಪ್ರಗತಿ ಬಹಳ ಕಡಮೆ. ಲಾಭ ಮಧ್ಯಮ ಆದರೆ ಪ್ರತಿಷ್ಠೆ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ ಆದರೆ ವೆಚ್ಚ ಮತ್ತು ತೊಂದರೆಯೂ ವಿಪರೀತ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಶತತಾರಿಕೆಯ ಕೊನೆಯ ೩ ಮತ್ತು ಪೂರ್ವಾಭಾದ್ರಪದದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೩, ೬, ೭ ಅನುಕೂಲ.

## ಮೀನ

ಪ್ರಕೃತಿ ಉತ್ತಮ. ಸ್ತ್ರೀ ಸುಖ ವೈಷಯಿಕ ಅನುಕೂಲ ಆದರೆ ಉಳಿದ ವಿಷಯಗಳಲ್ಲಿ ಅವಳು ಉಪಮರ್ದಕ ರೀತಿಯಲ್ಲಿ ವರ್ತಿಸುವಳು. ಉದ್ಯೋಗದಲ್ಲಿ ಪ್ರಗತಿ ಸಾಧಾರಣವೆ. ಆದರೆ ಪ್ರತಿಷ್ಠೆ ಮತ್ತು ಲಾಭವೂ ತುಂಬ ಆದರೆ ಅನೇಕರೊಡನೆ ನಿರರ್ಥಕ ಇಲ್ಲವೆ ಕ್ಷಿಲ್ಲಕ ಕಾರಣಗಳಿಗಾಗಿ ತಿಕ್ಕಾಟದ ಬೈದಾಡುವ ಕದಾಚಿತ ಕೈಗೆ ಕೈ ಹತ್ತುವ ಪ್ರಸಂಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಉತ್ತರಾಭಾದ್ರಪದ ಕೊನೆಯ ೩ ಮತ್ತು ರೇವತಿಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೪, ೫, ೯ ಅನುಕೂಲ.

---

# ಪುಸ್ತಕ ಮತ್ತು ವಿಮರ್ಶೆ

(೧೫ನೇ ಪುಟದಿಂದ)

ಈಗಿನಂತೆ ಅದು ಸ್ವತಂತ್ರವಾಗಿಯೆ ಉಳಿದು ಮಹಾತ್ಮಾ ಗಾಂಧಿಯವರು ಹೇಳಿದಂತೆ ಗ್ರಾಮರಾಜ್ಯದ ಪ್ರಯೋಗ ಮಾಡಿನೊಡಬೇಕೆಂದೂ ಸೂಚಿಸಿದ್ದಾರೆ. ಕೊಡಗಿನವರು ಮತ್ತು ಕರ್ನಾಟಕಸ್ಥರು ಪುಸ್ತಕವನ್ನೋದಿ ಯಾವ ಮಾರ್ಗವನ್ನನುಸರಿಸುವುದರಿಂದ ಕೊಡಗಿನ ಮತ್ತು ಇಡೀ ಕರ್ನಾಟಕದ ಸಾರ್ವಾಂಗಿಕ ಉನ್ನತಿಯಾಗುವದೆಂಬದನ್ನು ಮನವರಿಕೆ ಮಾಡಿಕೊಂಡು ಅದರಂತೆ ಕಾರ್ಯಕ್ಕಣಿಯಾಗಬೇಕು.

### ರಾಷ್ಟ್ರಕೂಟಕ್ಕೆ ಮೈಸೂರಿನ ಸಪ್ತರ್ಷಿಗಳು

ಲೇ:— ತಿರುಮಲೆ ತಾತಾಚಾರ್ಯ ಶರ್ಮನ್. ನೆಹರು ಪ್ರಕಟನೆ ಮಂದಿರ ಬೆಂಗಳೂರು ನಗರ. ಬೆಲೆ ನಾಲ್ಕಾಣೆ.

ವಿಶ್ವಕರ್ನಾಟಕದ ಸಂಪಾದಕರಾಗಿ ಸಾಹಿತ್ಯ ಸೇವೆಯನ್ನು ಬಗೆಬಗೆಯಿಂದ ಮಾಡುತಿರುವ ಶ್ರೀ ತಾತಾಚಾರ್ಯ ಶರ್ಮರವರು ಸದ್ಯದಲ್ಲಿ ನಡೆದ ರಾಷ್ಟ್ರಕೂಟದ ಚರ್ಚೆಯ ಸಂಬಂಧದಲ್ಲಿ ಈ ಪುಟ್ಟ ಪುಸ್ತಕವನ್ನು ಬರೆದಿದ್ದಾರೆ ಇದರಲ್ಲಿ ಮೈಸೂರಿನ ದಿವಾಣರ, ಪ್ರಜಾಪಕ್ಷದ ಧುರೀಣರ, ಪತ್ರಿಕಾಕರ್ತರ ವಿಚಾರಗಳನ್ನು ಪ್ರಜಾಪ್ರತಿನಿಧಿ ಸಭೆಯಲ್ಲಿ ನಡೆದ ಚರ್ಚೆಯ ಸ್ವರೂಪವನ್ನು ವಿವರಿಸಿ ಮೈಸೂರು ಸರಕಾರದವರು ಈ ಸಂಬಂಧದಲ್ಲಿ ಮೈಸೂರಿನ ಪ್ರತಿನಿಧಿಗಳು ಯಾರಾಗಿರಬೇಕೆಂಬುದನ್ನು ಈ ಪರ್ವಕಾಲದಲ್ಲಿ ಗೊತ್ತುಪಡಿಸಿ ಉಳಿದ ಸಂಸ್ಥಾನಗಳಿಗೆ ದಾರಿತೋರಿಸಲಿ ಎಂದು ಸೂಚಿಸಿದ್ದಾರೆ. ಪ್ರಸ್ತುತ ಚರ್ಚೆಯ ವಿಷಯವಾದ ರಾಷ್ಟ್ರಕೂಟವನ್ನು ಕುರಿತು ಆಚಾರ್ಯರು ಬರೆದ ಈ ಪುಸ್ತಕ ಉಪಯುಕ್ತವೆಂದು ಹೇಳಬೇಕಾಗುವದು. ಕನ್ನಡಿಗರು ಆಯಾ ಸಂಸ್ಥಾನದ ಅಧಿಪತಿಗಳು ಮತ್ತು ಪ್ರಜರು ಇದರ ಲಾಭ ಮಾಡಿಕೊಳ್ಳಬೇಕಾಗಿ ಸೂಚನೆ.

### ಸುಭಾಸ್ ರಾಷ್ಟ್ರಗೀತೆ

ಸಂಗ್ರಾಹಕ ಶ್ರೀ ಟಿ. ಬಿ. ಕೇಶವರಾವ ನವಭಾರತ ಕಾರ್ಯಾಲಯ ಬಳ್ಳಾರಿ— ಬೆಲೆ ೮ ಆಣೆ

ಈ ಚಿಕ್ಕ ಹೊತ್ತಿಗೆಯಲ್ಲಿ ಹಲವು ಕವಿಗಳು ದೇಶಭಕ್ತಿಯನ್ನು ದ್ಯೋತಿಸುವುದಕ್ಕಾಗಿ ಬರೆದ ಕವಿತೆಗಳು ಇವೆ. ಕನ್ನಡ ಸಾಹಿತಿಗಳು ವಿಶೇಷತಃ ಕವಿಗಳು ತರುಣತರುಣಿಯರಲ್ಲಿ ದೇಶಸ್ವಾತಂತ್ರ್ಯಪ್ರೇಮವನ್ನು ಹುಟ್ಟಿಸಿ ಅದಕ್ಕಾಗಿ ಸರ್ವಾರ್ಪಣ ಮಾಡಲು ಪ್ರೇರೇಪಿಸ ವಂಥ ಸಾಹಿತ್ಯ ನಿರ್ಮಿಸುತಿರುವದು ಇತ್ತೀಚೆಗೆ. ದೇಶಭಕ್ತಿಯ ಹಾಡು ಲಾವಣಿಗಳೂ ಕಡಮೆ ಕನ್ನಡವಲ್ಲಿ. ಈ ಬಗೆಯ ಸಾಹಿತ್ಯದ ಕೊರತೆಯ ಕಾಲದಲ್ಲಿ ಶ್ರೀಮಾನ್ ಕೇಶವರಾಯರು ಈ ಸಂಗ್ರಹವನ್ನು ಪ್ರಸಿದ್ಧಪಡಿಸಿ ಸಂಕೋಚದ ಸಂಗತಿ. ಡಾ. ಹರ್ಡೀಕರರು ..ಕ್ಕೆ ಆಶೀರ್ವಾದವನ್ನು ಕೊಟ್ಟಿದ್ದಾರೆ. ಕವಿಗಳ ರಾಷ್ಟ್ರೀಯ ಪದ್ಯಗಳನ್ನು ರಚಿಸಿದವರೂ ಆದ ಶ್ರೀ ಕರಗುದರಿಯವರು ಮುನ್ನುಡಿಬರೆದಿದ್ದಾರೆ. ಕರ್ನಾಟಕದ ತರುಣ ತರುಣಿಯರು ಈ ಪುಟ್ಟ ಪುಸ್ತಕದ ಉಪಯೋಗ ಮಾಡಿಕೊಂಡು ಸಂಗ್ರಹಕಾರರ ಶ್ರಮದ ಸಾರ್ಥಕ ಮಾಡಬೇಕೆಂದು ಸೂಚಿಸುತ್ತೇವೆ.

### ಒಡೆದ ಕನ್ನಡಿ

ಲೇಖಕರು. ಶ್ರೀ ಎಸ್ ಎಸ್ ಗಡಗೆಕರ, ಮಾರಾಟಗಾರರು ಮನೋಹರ ಗ್ರಂಥಭಾಂಡಾರ ಧಾರವಾಡ ಫೂ. ಆಪ್ಪಮಾಕಾರ ೮೨ ಪುಟಗಳು, ಬೆಲೆ ರೂ ೦-೧೨-೦

ಈ ಪುಸ್ತಕದಲ್ಲಿರುವ ಹನ್ನೊಂದು ಹರಟೆಗಳಲ್ಲಿ ಮೊದಲನೆಯದರಿಂದ ಅದು ತನ್ನ ಹೆಸರು ಪಡೆದಿದೆ. "ಶ್ರೀ ರಂಗರು" ಇದಕ್ಕೆ ಆಶೀರ್ವಾದದ ಮುನ್ನುಡಿ ಬರೆದಿದ್ದಾರೆ. ಇದರಲ್ಲಿರುವ ಹರಟೆಗಳೆಲ್ಲವೂ ಚುಟುಕಾಗಿಯೂ ರಸವತ್ತಾಗಿಯೂ ಇವೆ. ಅವುಗಳಲ್ಲಿ ಹಲವು ವಿವಿಧ ಸಾಧಾರಣ ಒಡವೆಗಳ ವಿಷಯಕ್ಕೆ ಲೇಖಕರ ಮನಸಿನಲ್ಲಿ ಸಂಜನಿಸಿದ ಕಲ್ಪನಾ ಲಹರಿಗಳು ಅಣುವಿನ ಮಹತ್ವವನ್ನೂ ಮಹತ್ತಿನ ಅಣುತ್ವವನ್ನೂ ತೋರಿಸಿಕೊಟ್ಟು ನಸುನಗೆಯ ತೆರೆಗಳನ್ನು ಲೇಖಕರು ಎಬ್ಬಿಸುತ್ತಾರೆ. ಲೇಖಕರ ಪ್ರಥಮ ಪ್ರಯತ್ನವೆಂಬ ದೃಷ್ಟಿಯಿಂದ ಸಾಕಷ್ಟು ಯಶಸ್ವಿಯಾಗಿದೆ.

### ಮುತ್ತಿನ ಚಿಪ್ಪು

ಲೇಖಕರು: ಶ್ರೀ ಕೆ. ನಾಗೇಶರಾಯ, ಪ್ರಕಾಶಕರು: ಪ್ರಚಲಿತ ಸಾಹಿತ್ಯ ಅನ್ನಪೂರ್ಣಂ, ವಿಶ್ವೇಶ್ವರ ಪುರಂ, ಬೆಂಗಳೂರು ನಗರ. ೯೬ ಪುಟ, ರೂ. ೧।—

೯೬ ಪುಟಗಳ ಈ "ಕಾದಂಬರಿ" ಅನುಕೂಲವಂತ ಮನೆತನಗಳ ಯಜಮಾನ ಆಕಸ್ಮಾತ್ ಕಣ್ಮುಚ್ಚಿದರೆ ಅವನ ಕುಟುಂಬ ಹಿತಶತ್ರುಗಳ ಕೈವಾಡದಿಂದ ಹೇಗೆ ನಿರ್ಗತಿಕ ಸ್ಥಿತಿಗಿಳಿಯುವದೆಂಬದನ್ನು ಚಿತ್ರಿಸಲು ಪ್ರಯತ್ನಿಸುತ್ತದೆ. ಕಥೆಯಲ್ಲಾಗಲಿ ಅಸಾಧಾರಣವೇನೂ ಇಲ್ಲ. ಅತಿ ಸಾಮಾನ್ಯ ತರಗತಿಯ ಪುಸ್ತಕವಿದು.

### ಪಂಚಾಂಗಯುಕ್ತ ವರ್ಷ ಭವಿಷ್ಯ

ಲೇ— ಜೋತಿರ್ವಿದ್ವಾನ್ ರಾಮಭಟ್ಟ ಜ್ಯೋತಿಷಿ ಹುಬ್ಬಳ್ಳಿ –ಪ್ರಕಾಶಕರು ಎ. ಆರ್. ಶಿವನಾಗಪ್ಪಾ ಆ್ಯಂಡ ಸನ್ ವಾಗ್ವಿಲಾಸ ಬುಕ್ ಡಿಪೊ ಹುಬ್ಬಳ್ಳಿ–ಅಂಚೆವೆಚ್ಚ ಸೇರಿ ಬೆಲೆ ೧ ರೂಪಾಯಿ ಇದರಲ್ಲಿ ಸರ್ವಜಿತ ಸಂವತ್ಸರದ ಪಂಚಾಂಗ ವರ್ಷಭವಿಷ್ಯ ಜ್ಯೋತಿಷ್ಯದ ಸಾಮಾನ್ಯ ಮಾಹಿತಿ, ಮಳೆಬೆಳೆಗಳ ಭವಿಷ್ಯ ರಾಜಕೀಯ ಭವಿಷ್ಯ ಆಯಾ ರಾಶಿಯವರಿಗೆ ಗ್ರಹಬಲ ಮುಂತಾದ್ದೆಲ್ಲ ವಿವರವಾಗಿ ಬರೆಯಲಾಗಿದೆ. ಆಯಾ ತಿಂಗಳಲ್ಲಿ ಆಗುವ ವ್ಯಾಪಾರದ ತೇಜಿಮಂದಿಯನ್ನು ಬರೆದಿರುವದರಿಂದ ವ್ಯಾಪಾರಸ್ಥರಿಗೆ ಉಪಯುಕ್ತವಾಗಿದೆ. ದ್ವಾದಶ ರಾಶಿಯವರ ಆಯಾ ಮಾಸಗಳ ಭವಿಷ್ಯವನ್ನು ಕೊಟ್ಟಿದ್ದಾರೆ. ಉಪನಯನ ವಿವಾಹಾದಿ ಮುಹೂರ್ತಗಳು ಕೊಡಲ್ಪಟ್ಟಿವೆ. ಪಂಚಾಂಗಗಳನ್ನೆಲ್ಲ ದೃಗ್ಗಣಿತ ಪದ್ಧತಿಯಿಂದ ಮಾಡಬೇಕೆಂದು ಮಹಾರಾಷ್ಟ್ರದ ಜ್ಯೋತಿಷಿಗಳು ನಿರ್ಣಯಿಸಿ ಏಕಮತ್ಯದಿಂದ ನಡೆಯುತಿರುವಂತೆ ಕರ್ನಾಟಕದ ಜ್ಯೋತಿಷಿಗಳಾದರೂ ಈ ಬಗ್ಗೆ ವಿಚಾರಮಾಡಿ ಬರುವ ವರ್ಷ ಕರ್ನಾಟಕ ಜ್ಯೋತಿಷಿಗಳ ಸಮ್ಮೇಲನವನ್ನು ಕೂಡಿಸಿ ಈ ಬಗ್ಗೆ ವಿಚಾರ ಮಾಡಬೇಕೆಂದು ಪ್ರಸ್ತುತ ಜ್ಯೋತಿಷಿಗಳು ಆತ್ಮನಿವೇದನದಲ್ಲಿ ಹೇಳಿದ್ದು ಸರ್ವಥೈವ ಯೋಗ್ಯವಾಗಿದೆ. ಕರ್ನಾಟಕದ ಜ್ಯೋತಿಷಿಗಳು ಇತ್ತ ಗಮನಿಸಬೇಕಾಗಿ ಸೂಚಿಸಿ ಕನ್ನಡಿಗರು ಈ ವರ್ಷಭವಿಷ್ಯದ ಉಪಯೋಗ ಮಾಡಿಕೊಳ್ಳಬೇಕೆಂದು ಹೇಳಬಯಸುತ್ತೇವೆ.

---

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ-ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿಸಿಪ್ರಕಟವಾಯಿತು.

## ಚಿಕ್ಕ ದೊಡ್ಡವರು

(೨ ನೇ ಪುಟದಿಂದ ಬಂದುದು)

ಲತೆಯನ್ನು ನಾನು ಎತ್ತಿಕೊಂಡಿದ್ದೆ. ಹೀಗಾಗಿ ಅವಳಿಗೆ ಅಷ್ಟು ತ್ರಾಸಾಗಲಿಲ್ಲ. ಅಂತೂ ಅಂಗಡಿಯೊಳಗೆ ಪ್ರವೇಶವಾಯಿತು. ತರತರಹದ ಬಂಗಾರದ ಬಳೆಗಳನ್ನು ತೋರಿಸಿದ. ಯಾವವೂ ನನಗೆ ಮನಸಿಗೆ ಬರಲಿಲ್ಲ. ಕೊನೆಗೆ ಮುತ್ತು ತೋಡಿಸಿದ ಸಪುರಾದ ಬಳೆ ಕೊಂಡೆವು.

ಅಂತೂ ಪತ್ತಲು ಕೊಂಡಾಯಿತು. ಬಳೆಗಳ ಖರೀದಿಯಾಯಿತು. ಅದರೊಟ್ಟಿಗೆ ಲತೆಗೆ ಒಂದು ಜೊತೆ ಶಿಲ್ಕಿನ ಅಂಗಿಗಳನ್ನು ಕೊಂಡೆವು. ನಾನೇನೋ ಪರಿವೆಯಿಲ್ಲದೆ ಇದ್ದೆ. ಆದರೆ ಶೀಲೆ ಮಾತ್ರ ಮೌನವಾಗಿದ್ದಳು. ದಾರಿಯಲ್ಲಿ ತುಸುವೂ ಮಾತನಾಡಲಿಲ್ಲ. ಕೇಳಿದ್ದಕ್ಕೆ 'ಹಾಂ' 'ಹೂಂ' ಎನ್ನುತ್ತಿದ್ದಳಷ್ಟೇ. ಮರುಮಾತಿಲ್ಲ.

ಮನೆಗೆ ಮುಟ್ಟುತ್ತಲೇ ಕೇಳಿದೆ "ಶೀಲಾ, ನಿನಗೆ ಪತ್ತಲ ಮನಸ್ಸಿಗೆ ಬಂದಿತೇ? ಬಳೆ ಬಹಳ ಚೆನ್ನಾಗಿ ಬಂದಿವೆ ನೋಡು."

ಅದಕ್ಕೆ "ಹೌದು" ಎಂದಳು ಅವಳಿಗೆದುದ್ದಿನ ವಿಷಯವೇ ತಲೆಯಲ್ಲಿ. ಮತ್ತೆ, "ಆದರೆ ನಿಮ್ಮ ಅವಧಾನಿಗಳಿಂದ ಹಣ ಬೇಗ ವಸೂಲಿಯಾಗಲಿ ಇನ್ನು ಮೂರು ದಿನಗಳಲ್ಲಿ ಅವರ ಸಂಬಳ."

"ಈಗೆಲ್ಲ ಅದರ ಮಾತೇಕೆ? ಬರೇ ಹುಚ್ಚಿ ನೋಡು. ಅದರ ಗೊಡವೆ ನಿನಗೇಕೆ?" ಎಂದು ಸುಮ್ಮನಾಗಲು ಹೇಳಿದೆ.

* * * *

ಇಂದು ಜನವರಿ ಎರಡನೆಯ ತಾರೀಖು. ಸರಕಾರೀ ಆಫೀಸುಗಳಲ್ಲೆಲ್ಲ ಸಂಬಳವಾಗುವ ದಿನ. ಆಫೀಸಿಗೆ ಹೋಗುವಾಗಲೆ ಅವಧಾನಿಗಳ ನೆನಪಾಯಿತು. ಇಂದು ಅವರು ಹಣ ಕೊಡದಿದ್ದರೆ? ಶೀಲೆಗೆ ಏನು ನೆವ ಹೇಳಿ ಸುಮ್ಮನಾಗಿಸಬೇಕು. ಎಂಬುದನ್ನೇ ಯೋಚಿಸುತ್ತಾ ಇದ್ದೆ. ಕೆಲಸದಒತ್ತಡ ಬಹಳವಿದ್ದರಿಂದ ಯಾವ ಕಡೆಗೂ ಲಕ್ಷಹೋಗಲಿಲ್ಲ. ಅವಧಾನಿಗಳ ವಿಷಯವೂ ಕೂಡಾಮರೆತುಹೋಯಿತು.

ಮನೆಗೆ ಬಂದು ಸೇರಿದಾಗ ಕತ್ತಲಾಗಿತ್ತು. ಆಗ ತಿರುಗಿ ನೆನಪಾಯಿತು. ಕಾಫೀ ಕುಡಿದು ಪೇಪರು ಹಿಡಿದು ಓದುತ್ತಾ ಕುಳಿದೆ. ದಿನವೂ ಕತ್ತಲಾದರೂ ತುಸು ಹೊರಗೆ ಅಡ್ಡಾಡಿ ಬರುವವ ನಾನು. ಆದರೆ ಇಂದು ಅವಧಾನಿಗಳ ಪ್ರತೀಕ್ಷೆಯಲ್ಲಿ ಮನೆಯಲ್ಲಿಯೇ ಕುಳಿತೆ. ನಾನು ಹೊರಗೆ ಹೋದರೆ ಬರದೆಯೂ 'ಬಂದಿದ್ದೆ' ಎಂದು ಘುಸಲಾಯಿಸಿದರೆ? ಎಂಬ ಶಂಕೆಯಾಯಿತು. ಕಾರಣ ಕಾಯಬೇಕಾಯಿತು. ಇದೇ ರೀತಿ ಕಾಯುತ್ತ ರಾತ್ರಿ ಊಟದ ಹೊತ್ತಾಯಿತು. ಊಟಕ್ಕೆ ಒಳಗೆ ಹೋದೆ. ಊಟಕ್ಕೆ ಕೂತಾಗ ಊಟದ ರುಚಿಯೇ ಇಲ್ಲ ನನಗೆ. ಮಾತಾಡಲು ಮನಸ್ಸಾಗಲಿಲ್ಲ. ಶೀಲಾ ಇದೆಲ್ಲ ನೋಡುತ್ತಿದ್ದಳು. ಅವಳಿಗೆ ಮನಸ್ಸಿನಲ್ಲಿಯೇ ಆನಂದವಾಗಿರಬೇಕು. ಅವಳ ಮಾತೇ ದಿಟವಾಗುತ್ತಿದೆಯೆಂದು ಊಟ ಮುಗಿಸಿ ಹೊರಬಂದೆ. ಗಂಟೆ ಹತ್ತಾವರೆಯಾಯಿತು. ಕಣ್ಣಿಗೆ ನಿದ್ದೆ ಬರಹತ್ತಿತು. ಆದರೆ ನಮ್ಮ ಸುಬ್ಬಣ್ಣನವರ ಸದ್ದೇ ಇಲ್ಲ. ಆಗ ಆಕಳಿಸುತ್ತ ಶೀಲೆ ಬಂದು,

"ಏನು ಕಾಯುತ್ತೀರಿ ಅವರನ್ನು? ಸುಮ್ಮನೆ ಹೋಗಿ ಮಲಗಿಕೊಳ್ಳಿ. ಈ ತಿಂಗಳ ಕಡೆಯವರೆಗೂ ನಿಮಗೆ ಹಣ ಸಿಗುವದಿಲ್ಲ ನೋಡಿ."

ಅವರು ನನ್ನ ವಿಶ್ವಾಸದ ಗೆಳೆಯರು. ಮತ್ತೆ ಅವರಿಗೇನು ಕಮ್ಮಿಯೇ? ದೊಡ್ಡವರು. ಅಲ್ಲಾ, ತುಸು ಅಡಚಣೆಯೆಂಬುದು ದೊಡ್ಡವರಿಗೂ ಇದೆ ಚಿಕ್ಕವರಿಗೂ ಇದೆ. ಅಂತ ನಾವು ಅವಿಶ್ವಾಸ ತಳೆಯುವದೆ?

"ದೊಡ್ಡವರು! ಸಾಕು. ಮಲಗಿಕೊಳ್ಳಿ" ಎಂದು ಅಜ್ಞೆಯಾಯಿತು.

* * * *

ಮತ್ತೆ ಹದಿನೈದು ದಿನಗಳು ಕಳೆದವು. ದಿನವೂ ಕಾಯುತ್ತ ಬೇಸತ್ತು ಹೋದೆ. ಆದರೆ ಅವಧಾನಿಗಳ ದರ್ಶನವೇ ಇಲ್ಲ. ಮತ್ತೆ ಅವರ ಹೆಂಡತಿಯ ಹೆರಿಗೆಯ ವಿಷಯವೂ ಕೇಳಲಿಲ್ಲ. ನಮ್ಮೂರವರು ನಮ್ಮವರು ಎಂತ ಕೆಟ್ಟೆ ಎನ್ನಿಸಿತು. ದೊಡ್ಡವರು, ಅವರನ್ನು ಒಂದು ಐವತ್ತು ರೂಪಾಯಿಗಳಿಗಾಗಿ ಕೇಳಿದರೆ ಅಪಮಾನವೆಂದು ತಿಳಿಯದಿರಲಾರರೇ? ಅವರಾಗಿಯೇ ಕೊಡುತ್ತೇವೆ ಎಂದಿದ್ದಾರೆ.

ಅಷ್ಟರಲ್ಲಿ ನನ್ನ ಸಂಬಳದ ಹಣ ಪೂರ್ಣ ಖರ್ಚಾಗಿ ಹೋಗಿತ್ತು. ಒಂದೋ ಎರಡೋ ಉಳಿದಿದ್ದವು. ಶೀಲೆಯ ಮಾತು ದಿಟವಾಗಿತ್ತು. ಅವಳ ಮಾತಿಗೆ ಬೆಲೆಕೊಡದ್ದಕ್ಕೆ ಕೆಡಕೆನಿಸಿತು. ಮತ್ತೆ ಅಷ್ಟರಲ್ಲಿ ಲತೆಗೆ ಒಮ್ಮಿಂದೊಮ್ಮೆಲೆ ಜ್ವರ ಪ್ರಾರಂಭವಾದವು. ಅವಳ ಚಿಕಿತ್ಸೆಗೆ ಹಣ ಬೇಡವೆ? ಡಾಕ್ಟರರು ಫೀ ಕೊಡದೆ ಮನೆಗೆ ಬರುತ್ತಾರೆಯೆ? ಏನು ಮಾಡುವದು, ಎಂಬದು ತಿಳಿಯದಾಯಿತು. ಗಾಬರಿಗೊಳಗಾದೆ.

ನನ್ನಾಕೆ, "ಈಗೇನು ಮಾಡುತ್ತೀರಿ? ಖರ್ಚಿಗೆ ಒಂದು ಪೈಯಿಲ್ಲ. ಡಾಕ್ಟರರಿಗೆ ಎಲ್ಲಿಂದ ಕೊಡುತ್ತೀರಿ? ನಿಮ್ಮ ಅವಧಾನಿಗಳ ಹತ್ತಿರ ಹೋಗಿ ಕೇಳಿರಲ್ಲಾ. ಅವರಿಗೆ ಮಾನ ಮರ್ಯಾದೆ ಇದ್ದರಲ್ಲವೆ? ದೊಡ್ಡವರಂತೆ. ಇವತ್ತು ಹೋಗಿ ಕೇಳಿ."

"ಆಗಬಹುದು" ಎಂದು ಸಮ್ಮತಿಸಿದೆ.

ನೆರೆಮನೆಗೆ ಹೋಗಿ ಅವಧಾನಿಗಳು ಇದ್ದಾರೆಯೇ ಎಂದು ಕೇಳಿದೆ. "ಹಾಂ" ಎಂದು ಉತ್ತರ ಬಂತು. ಬದುಕಿದೆ ಎಂದು ಮನೆಯೊಳಕ್ಕೆ ಹೋದೆ. ಅದೇ ಆಗ ಪೋಸ್ಟಮನ್ ಬಂದು ಮನಿ ಆರ್ಡರ ಹಣ ಎಣಿಸಿ ಕೊಡುತ್ತಿದ್ದ. ನಾನು ಬರುವದನ್ನು ಕಂಡು ಮುಖ ಒಂದು ತರಹವಾಯಿತು ಅವರದು. ಸ್ವಾಗತಿಸುವದನ್ನು ಮರೆತರು.

ನಾನು ನೇರವಾಗಿ ಹೋಗಿ ಅಲ್ಲಿದ್ದ ಮಂಚದ ಮೇಲೆ ಕುಳಿತೆ. ಮತ್ತೆ ನಮ್ರತನದಿಂದ ನಿಧಾನವಾಗಿ ಪ್ರಸ್ತಾಪವೆತ್ತಿದೆ. ಅದನ್ನು ಕೇಳುತ್ತಲೇ ಒಮ್ಮೆಲೆ ರೇಗಿದರು.

"ಏನೋ ಸೀತಾರಾಮು (ಈಗ ಬರೇ ಏಕವಚನ!)? ನಿನ್ನ ಹಣ ತಿರುಗಿ ಕೊಡುವದಿಲ್ಲವೆಂದು ತಿಳಿದೆಯಾ? ನಿನಗೆ ನನ್ನ ಮೇಲೆ ವಿಶ್ವಾಸವಿಲ್ಲವೆ? ವಿಶ್ವಾಸವಿಲ್ಲದೆ ಯಾಕೆ ಕೊಟ್ಟೆ? ಗೆಳೆಯನಂತೆ! ನಮಗೆ ಕಷ್ಟ ಕಾಲದಲ್ಲಿ ಸಹಾಯ ಮಾಡದ ಗೆಳೆಯನೆಂತಹವನು? ಹೋಗು ನಾನು ನಿನಗೆ ಇನ್ನು ೭–೮ ದಿನಗಳಲ್ಲಿ ಖಂಡಿತ ಕೊಡುವೆ."

"ಆದರೆ ಅವಧಾನಿಗಳೇ ನಮ್ಮ ಮಗು ಲತೆಗೆ ಜ್ವರ. ಡಾಕ್ಟರರನ್ನು ಕರೆತರಲು ಹಣವಿಲ್ಲ. ನೀವು......" ಎಂದು ಅಂಗಲಾಚಿ ಬೇಡಿದೆ.

"ಒಂದು ಐದು ರೂಪಾಯಿ ಇಲ್ಲವೆ? ಹಾಗಾದರೆ ನೌಕರಿಯೇಕೆ ಮಾಡುವಿಯಪ್ಪಾ? ಮುಂದಾಲೋಚನೆ ಇಲ್ಲ ನೋಡು ಈಗಿನ ಮಂದಿಗೆ. ಈಗ ನನ್ನ ಹತ್ತಿರ ಹಣವಿಲ್ಲ ಹೋಗು."

"ಇದೆಯಲ್ಲಾ ಅದೋ" "ಎಂದು ಕೈಯಲ್ಲಿದ್ದ ನೋಟುಗಳನ್ನು ತೋರಿಸಿದೆ.

ಅದಕ್ಕೆ ಕೆರಳಿದರು. "ಅದೇನು ನಿನ್ನಜ್ಜನದೆ? ಇಲ್ಲಿ ನನ್ನಾಕೆಗೆ ಶೀಕು ಕಾರಣ ಆಸ್ಪತ್ರೆಯಲ್ಲಿ ಇಡಬೇಕಾಯಿತು. ಮುಂಚೆ ಮನೆಯಲ್ಲಿಯೇ ಹೆರಿಗೆ ಮಾಡಿಸಬೇಕೆಂದಿದ್ದೆ. ಆದರೆ ಡಾಕ್ಟರರು ಆಸ್ಪತ್ರೆಯಲ್ಲಿ ಇಡಲು ಹೇಳಿದರು. ನನ್ನ ಕೈಲಿ ಹಣವಿಲ್ಲದೆ ಮಾವನವರಿಂದ ತರಿಸಿದೆ. ಈಗ ಹೋಗು. ಬೇರೆಯವರ ಹತ್ತಿರ ಒಂದು ಐದು ರೂಪಾಯಿ ಇಸಕೋ ನಂತರ ಕೊಡುವಿಯಂತೆ ಹೋಗು," ಎಂದು ಏಳಹತ್ತಿದರು.

"ಆದರೆ......ನೀವಂತೂ ನನಗೆ ಕೊಡಬೇಕು. ಇದರೊಳಗಿಂದ ನನಗೆ ಕೊಡಿ. ನೀವೆ ನಂತರ ಭರಾಯಿಸಿ ಡಾಕ್ಟರರಿಗೆ ಕೊಡಿ."

"ಅದೇನು ನನಗೆ ತಿಳಿಯದೆ? ಸಾಧ್ಯವಿಲ್ಲ," ಎಂದು ಖಂಡತುಂಡ ಉತ್ತರವಿತ್ತರು.

"ಅಂತೂ ಕೊನೆಯ ಮಾತೆಂದರೆ ಸಾಧ್ಯವಿಲ್ಲವೆಂದೇ? ನಿಮಗೆ ತುಸುವೂ ಕನಿಕರವಿಲ್ಲ. ನಿಮಗೆ ಗರಜು ಇದ್ದಾಗ ಬಂದಿರಿ ನನ್ನ ಕಡೆ. ಇರಲಿ" ಎಂದು ಮೋರೆ ತಗ್ಗಿಸಿ ಹೊರಕ್ಕೆ ಬಂದೆ.

ಹಾಗೆಯೇ ನಾಲ್ಕೆಂಟು ಜನರನ್ನು ಕಂಡೆ ಅವರೂ 'ಆಗದು' ಎಂದರು. ಹೊತ್ತಿಗೆ ಆಗದವರು ಎಂತಹ ಗೆಳೆಯರೋ?

ಮನೆಗೆ ಬರಿಗೈಯಿಂದಲೇ ಬಂದೆ. ನನ್ನಾಕೆಯ ಮೋರೆ ಬಾಡಿತ್ತು. ಅವಳಿಗೂ ಉಪಾಯ ತೋರದಾಯಿತು.

"ನಾನೇಕೆ ಆ ಪತ್ತಲ ಕೊಳ್ಳಬೇಕಿತ್ತೋ? ಇಲ್ಲದಿದ್ದರೆ ಒಂದು ೩೦–೩೫ ರೂಪಾಯಿಗಳಾದರೂ ಇರುತ್ತಿದ್ದವು. ಈ ರೀತಿ ಕಚ್ಚಾಡಬೇಕಾಗಿರಲಿಲ್ಲ" ಎಂದು ಮುಂತಾಗಿ ತನ್ನನ್ನೇ ಬೈದುಕೊಳ್ಳಹತ್ತಿದಳು. ತಾಯಿಕರುಳಲ್ಲವೇ? ಮಗ್ಗು ಜ್ವರದಿಂದ ನರಳುವದನ್ನು ನೋಡಲಾಗಲಿಲ್ಲ. ಅವಳಿಂದ.

"ದೊಡ್ಡವರೇ ಹೀಗೆ! ಚಿಕ್ಕವರ ಮೇಲೆ ತುಸುವೂ ದಯೆಯಿಲ್ಲ. ಇಲ್ಲದಿದ್ದರೆ ನಮ್ಮ ಮೇಲೆ ತುಸುವೂ ಕನಿಕರ ಬರಲಿಲ್ಲವೇಕೋ?" ಎಂದು ನಾನು ಒಂದು ಬದಿಯಲ್ಲಿ ಕೂತೆ.

ಅತ್ತ ಮಗು ಲತಾ ಹಲಬುತ್ತಿದ್ದಳು. ಅಳುವಂತೂ ಸಾಗಿಯೇ ಇತ್ತು. "ಬಾಮ್ಮ" ಅಂತಾ ಅವಳನ್ನು ತೊಡೆಯ ಮೇಲೆ ತೆಗೆದುಕೊಂಡು ಕೂತೆ.

ಅಷ್ಟರಲ್ಲಿ ನಾಟಕದ ದೃಶ್ಯ ಬದಲಾದಂತಾಯಿತು. ನನ್ನ ಕಣ್ಣುಗಳನ್ನೇ ನಾನು ನಂಬದಾದೆ. ನಮ್ಮ ಕೆಲಸದಾಕೆ ಒಳಕ್ಕೆ ಬಂದು ನಮಸ್ಕರಿಸಿದಳು. ಮತ್ತೆ ಶೀಲೆಯ ಕೈಗೆ ಎರಡು ಹತ್ತರ ನೋಟುಗಳನ್ನು ಇತ್ತಳು.

"ಅಮ್ಮಾವ್ರೆ ಆ ಸರ್ತಿ ನಮ್ಮ ಮನಿ ಗಂಡಸ್ರಿಗೆ ಮೈ ಬೇಸರಾದಾಗ ನಿಮ್ಮ ಕೈಲಿ ಇಪ್ಪತ್ತು ರೂಪಾಯಿ ಇಸಕೊಂಡಿದ್ರಿ. ಈಗ ನಮ್ಮವರು ನಿಮ್ಮ ದಯದಿಂದ ಉಷಾರಾಗ್ಯಾರ್ರಿ. ಈ ಹಣಾ ನಿಮ್ಗೆ ವಾಪ್ಸು ಮಾಡಲು ಕೊಟ್ರೆ. ನಾವು ಚಿಕ್ಕವರಾದ್ರೆ ಏನಾಯ್ತ್ರಿ, ನಮಗೂ ಅನುವು ಅಪತ್ತಿನ ಜ್ಞಾನ ಐತರಿ. ತಗೊಳ್ಳಿ. ಸುಮ್ಮಗೆ ಕೂಡಬ್ಯಾಡ್ರಿ. ಡಾಕ್ತರರಿಗೆ ತನ್ನಿ. ನಮ್ಮ ಕಂದನ್ನ" ಎಂದು ಲತೆಯನ್ನು ಎತ್ತಿಕೊಂಡಳು. "ಹೋಗಿ, ನಿಮ್ಮ ಕೆಲಸ ನಾ ನೋಡಿಕೋತೇನಿ" ಎಂದು ಹೇಳಿದಳು.

ಎಂದೋ ಒಂದು ಇಪ್ಪತ್ತು ರೂಪಾಯಿ ಒಯ್ದಿದ್ದಳು. ನನಗೆ ನೆನಪು ಕೂಡಾ ಇರಲಿಲ್ಲ. ಅವಳಾಗಿಯೇ ತಂದುಕೊಟ್ಟಳು.

ನನಗೆ ಹಿಡಿಸಲಾರದಷ್ಟು ಆನಂದವಾಯಿತು. ಅಂದೇ ನನ್ನ ದಾನಧರ್ಮದ ಚಟ ಕಡಿಮೆಯಾಯಿತು. ಸತ್ಪಾತ್ರರಿಗೇ ಕೊಡಹತ್ತಿದೆ.




### ಕಳ್ಳಸಂತೆ

ಲೇಖಕರು: ಶ್ರೀ ಬೇಂದ್ರೆ ಲಕ್ಷ್ಮಣರಾಯರು, ಪ್ರಕಾಶಕರು: ಲಲಿತ ಸಾಹಿತ್ಯ ಮಾಲೆ, ಧಾರವಾಡ; ೮೯ ಪುಟ, ಬೆಲೆ ರೂ. ೧—೦—೦

ಶ್ರೀ ಲಕ್ಷ್ಮಣರಾಯರ ಚಿಕ್ಕ ಕಥೆಗಳ ಎರಡನೆ ಸಂಗ್ರಹವಿದು. ಮೊದಲನೆಯದರಿಂದ ಕನ್ನಡಿಗರಲ್ಲಿ ಎದ್ದ ಆಶೆಯನ್ನು ಈಡೇರಿಸಿದೆಯೆಂದು ಧಾರಾಳವಾಗಿ ಹೇಳಬಹುದು. ಈ ಸಂಗ್ರಹದ ಏಳು ಕತೆಗಳಲ್ಲಿ ಒಂದು ಮಾತ್ರ ಇಂಗ್ಲೀಷ ಕತೆಯ ಅನುವಾದ; ಉಳಿದವೆಲ್ಲ ಸ್ವತಂತ್ರ ಕೃತಿಗಳು. ಕನ್ನಡಿಗರ ದುರ್ದೈವಕ್ಕೆ ಸಾಮಾನ್ಯವಾಗಿ ಸ್ವತಂತ್ರ ಕೃತಿಗಳ ಜತೆ ಅನುವಾದ ಕತೆಗಳು ಪೋಣಿಸಿದಾಗ "ಮುತ್ತಂ ಮೆಳಸುಮಂ ಕೋದಂತೆ" ಕಾಣಿಸುವದು ರೂಢಿಯಾಗಿಬಿಟ್ಟಿದೆ. ಬೇಂದ್ರೆಯವರ ಈ ಸಂಗ್ರಹ ಮಾತ್ರ ಈ ರೂಢಿಗೆ ಅಪರೂಪ ಅಪವಾದವಾಗಿ ನಿಂತಿದೆ. ಇಲ್ಲಿರುವ ಎಲ್ಲ ಕತೆಗಳಲ್ಲಿ ಒಂದು ಮಾಟ, ಅಚ್ಚುಕಟ್ಟು ಒಡೆದು ಕಾಣುತ್ತವೆ. ಕತೆಗಾರನಿಗೆ ತಾನೇನು ಹೇಳಹೊರಟಿರುವೆನೆಂಬುದರ ಅರಿವು ಒಂದು ಕ್ಷಣವೂ ದೃಷ್ಟಿಪಥದಿಂದ ತಪ್ಪಿಲ್ಲ. ಮಡಿವಂತರು ಇದರ ಎಲ್ಲ ಕತೆಗಳನ್ನು ಮುಟ್ಟಲಿಕ್ಕಿಲ್ಲ. ಆದರೆ ಅದು ವೈಯಕ್ತಿಕ ರುಚಿಯ ಮಾತು. ಮುಖ್ಯ ಮಾತು, ಹೇಳಬೇಕಾದುದನ್ನು ಚೆನ್ನಾಗಿ ಹೇಳುವ ಸಾಮರ್ಥ್ಯ. ಅದು ಈ ಕತೆಗಾರರಿಗೆ ಸಾಧಿಸಿದೆಯೆಂಬದು ನಿರ್ವಿವಾದ. ಹೊಸ ವಸ್ತುಗಳ ಮೇಲೆ ಕಥೆ ಹೊಸೆಯುವಲ್ಲಿಯೂ ಲೇಖಕರು ಚಾತುರ್ಯವನ್ನು ಪ್ರದರ್ಶಿಸಿದ್ದಾರೆ. ೧೯೪೨ ರ "ಭೂಗತ" ಚಳವಳಿಯ ಹಿನ್ನೆಲೆಯಲ್ಲಿ ಲೇಖಕರು "ಚಕಮಕಿ" ಸಂಗ್ರಹದಲ್ಲೊಂದು ಕಥೆ ಬರೆದಿದ್ದರು. ಅದು ಸುಖಾಂತವಾಗಿತ್ತು. ಇದರಲ್ಲಿರುವ "ತಂಗಿಗೆ ಉಡುಗೊರೆ" ಅದೇ ಹಿನ್ನೆಲೆಯಲ್ಲಿ ತೆಗೆದ ದುರಂತ ಚಿತ್ರ. ಕ್ರಾಂತಿ "ಸಂಗನಗೌಡ ಪಾಟೀಲ"ನನ್ನು ಪೋಲೀಸರಿಂದ ಬಚ್ಚಿಟ್ಟು ವಿಧಿ ಸಂಘಟನೆಯಿಂದ ಗಂಡನ ಕೈಗೊಡಲಿಗೆ ಆಹುತಿಯಾದ ರಾಮಿಯ ಭಯಾನಕ ಕತೆ ಹೃದಯವಿದ್ರಾವಕವಾಗಿದೆ. ಶ್ರೀ ಲಕ್ಷ್ಮಣರಾಯರು ಸಾಹಿತ್ಯರಂಗದಲ್ಲಿ ತಡವಾಗಿಯೆ ಕಾಲಿಟ್ಟರು. ಆದರೆ ಅವರು ಮೊದಲ ನಿಟ್ಟಿಗೇ ಪರಿಪಕ್ವ ಕಥೆಗಳನ್ನಿತ್ತು ತಮಗೊಂದು ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ವಸ್ತು ಪ್ರಧಾನ ಕಥೆಗಳನ್ನು ಬರೆವಲ್ಲಿ ಇವರು ತೋರಿದ ಕೈಚಳಕವನ್ನು ನೋಡಿದರೆ ಸನ್ನಿವೇಶಪ್ರಧಾನವಾದ ಕಾದಂಬರಿಗಳಲ್ಲಿಯೂ ಇವರು ಯಶಸ್ವಿಯಾಗಿ ಕೈಯಾಡಿಸಬಲ್ಲರೆಂದು ಆಶಿಸಬಹುದು. ಶ್ರೀ ಲಕ್ಷ್ಮಣರಾಯರು ಇತ್ತ ಗಮನಿಸಬೇಕು.

### ಹಿಡಿ ಹೂವು

ಲೇ: ಶ್ರೀ ಎಂ. ವಿ. ಸೀತಾರಾಮಯ್ಯಾ, ಪ್ರಕಾಶಕರು: ಸತ್ಯಶೋಧನ ಪ್ರಕಟನ ಮಂದಿರ, ಕೋಟೆ, ಬೆಂಗಳೂರ ನಗರ; ... ಪುಟ, ೧೦ ಆಣೆ.

ಇದರಲ್ಲಿ ಶ್ರೀ ಸೀತಾರಾಮಯ್ಯನವರ "ಕನ್ನಡಮ್ಮನ ಕೊಡಗು" ಮತ್ತು "ಕವಿಯ ಬಾಳು" ಎಂಬ ಎರಡು ದೊಡ್ಡ ಲೇಖ ಮಾಲೆಗಳೂ ಮತ್ತೈದು ಚಿಕ್ಕ "ಹನಿ ಕತೆಗಳೂ ಅಡಕವಾಗಿವೆ. ಲೇಖಕರೇ ತೆಗೆದ ಶ್ರೀಯವರ ಸೀಸದ ಕಡ್ಡಿಯ ಚಿತ್ರವೂ ಅವರ ಪುಣ್ಯ ಸ್ಮೃತಿಗಾಗಿ ಬರೆದ ಚರಮಗೀತವೂ ಸೇರಿಸಲ್ಪಟ್ಟಿವೆ. "ಕನ್ನಡಮ್ಮನ ಕೊಡಗು" ಲೇಖ ಮಾಲೆಯಲ್ಲಿ ಕನ್ನಡಮ್ಮ ಹಳೆ ಹೆಂಗಸಿನ ರೂಪಧರಿಸಿ ಕರ್ನಾಟಕದಲ್ಲಿ ಬಹುಶಃ ಮೈಸೂರು ಸಂಸ್ಥಾನದಲ್ಲಿ ಮಾತ್ರ ಸಂಚಾರ ಮಾಡಿ, ಕನ್ನಡಿಗರ ನಡೆನುಡಿಗಳಲ್ಲಿರುವ ಕನ್ನಡದ ಅಭಿಮಾನ ಶೂನ್ಯತೆಯನ್ನು ಕಂಡು ಕೊರಗುವಳು. ಅದರಲ್ಲಿ ಅಧಿಕಾಂಶ ಸತ್ಯಚಿತ್ರವಾಗಿದ್ದರೂ "ಫೇಸ್ ಪೌಡರ", ಕೈಗಡಿಯಾರ, ಎತ್ತರ ಹಿಮ್ಮಡದ ಜೋಡು, ಮೋಟುಕೊಡೆ ಮೊದಲಾದ ಹೊಸಗಾಲದ ಹೆಣ್ಣುಮಕ್ಕಳ "ಫ್ಯಾಶನ್" ಗಳನ್ನು ಕಂಡು ಸಗ್ಗತನಿ ಮುದುಕಮ್ಮನಂತೆ ಕಣ್ಣೀರು ಮಿಡಿಯುವ ಕನ್ನಡಮ್ಮನ ಬಗ್ಗೆ ತುಸು ಉಪಹಾಸ ಮಿಶ್ರಿತ ಕನಿಕರವಾಗುತ್ತದೆ. ಮಣ್ಣಿನ ಹಣತೆಯ ಬದಲು ವಿದ್ಯುದ್ದೀಪ, ಕಲ್ಲು ಗುಡಿಗಳ ಬದಲು ಕಾಂಕ್ರೀಟ ಕಟ್ಟಡ ಮೊದಲಾದ ಕನ್ನಡ ಸಂಸ್ಕೃತಿಗೆ ಹೊರತಾದ ಕುರುಹುಗಳ ಬಗ್ಗೆ ಸದ್ಯ ಅವಳಿಂದ ಲೇಖಕರು ನಿಟ್ಟುಸಿರು ಸುಯ್ಯಿಸಲಿಲ್ಲವಲ್ಲ! "ಕವಿಯ ಬಾಳು" ಕನ್ನಡದ ಕವಿಗಳ ಸ್ಥಿತಿಗತಿಯನ್ನು ಕುರಿತ ರೊಚ್ಚಿನ ಕಿಡಿಗಳ ಮಾಲೆ. "ಹನಿಕತೆ" ಗಳಲ್ಲಿ "ಕಿರುಹಕ್ಕಿ" ಯ ಹಾಡು ಬಹಳ ಸುಂದರವಾಗಿದೆ. ಒಟ್ಟಿನ ಮೇಲೆ ವಾಚನೀಯ ಪುಸ್ತಕ.

### ಕೊಡಗಿನ ಭವಿಷ್ಯ

ಲೇ— ಬಿ. ಡಿ. ಗಣಪತಿ ಮಡಿಕೇರಿ ಮಿತ್ರ ಕುಟೀರ ಮಡಿಕೇರಿ ಬೆಲೆ ೧ ರೂಪಾಯಿ.

ಈ ಪುಟ್ಟ ಪುಸ್ತಕದಲ್ಲಿ ನಾಲ್ಕು ಭಾಗಗಳನ್ನು ಮಾಡಿದ್ದು ಮೊದಲನೆ ಭಾಗದಲ್ಲಿ ಕೊಡಗಿನ ಪೂರ್ವೇತಿಹಾಸವನ್ನು ವಿವರಿಸಿ ಅದರ ಭವಿಷ್ಯ ಎಂತಿರಬೇಕೆಂಬುದನ್ನು ವಿವೇಚಿಸಲಾಗಿದೆ. ಎರಡನೆ ಭಾಗದಲ್ಲಿ ಮಾನವ ಹಕ್ಕು ಬಾಧ್ಯತೆ ಆ ಬಗ್ಗೆ ಕಾಂಗ್ರೆಸಿನ ಠರಾವಿನ ಮೊದಲಾದ್ದನ್ನು ಚರ್ಚಿಸಲಾಗಿದೆ. ಸ್ವದೇಶಿ ರಾಜ್ಯ ಘಟನೆಯ ರೂಪರೇಷೆಯನ್ನು ಮೂರನೆ ಭಾಗದಲ್ಲಿ ಚರ್ಚಿಸಲಾಗಿದೆ. ಕೊನೆಯ ಭಾಗದಲ್ಲಿ ಸಂಯೋಜನೆ ವಿಭಜನೆ ಪ್ರಶ್ನೆಗಳನ್ನು ವಿಚಾರಿಸಿ ಅನೇಕ ವರ್ಷಗಳಿಂದ ಪ್ರತ್ಯೇಕವಾಗಿದ ಕೊಡಗು ಮೈಸೂರನ್ನೂ, ಸೇರುವದಿಲ್ಲ. ಏಕೀಕೃತ ಕರ್ನಾಟಕದಲ್ಲಿಯೂ ಸೇರಬಯಸುವದಿಲ್ಲ.

—೧೬ನೇ ಪುಟಕ್ಕೆ

ಮೈಸೂರು ರಾಜಕಾರಣ

# ಸುಧಾರಣೆಗಳ ಬಗ್ಗೆ ಸರಕಾರದ ಪ್ರಶ್ನಮಾಲಿಕೆ

## ಕೆ ಟಿ ಭಾಷ್ಯಂ ಅವರ ಎಚ್ಚರಿಕೆ

## ಸೊಂಡೂರು ರಾಜರ ಮಾರ್ಗದರ್ಶನ

ಮೈಸೂರು ದಿವಾಣರಾದ ಸರ್ ಎ. ರಾಮುಸ್ವಾಮಿ ಮುದಲಿಯಾರರ ಅನುಪಸ್ಥಿತಿಯಲ್ಲಿ ಅವರ ಹೆಸರಲ್ಲಿ ಒಂದು ಪ್ರಸಿದ್ಧಿ ಪತ್ರಿಕೆ ಹೊರಡಿಸಲ್ಪಟ್ಟಿದೆ. ಅದರಲ್ಲಿ ಮುಂಬರುವ ರಾಜಕೀಯ ಸುಧಾರಣೆಗಳ ರೂಪರೇಷೆ ಹೇಗಿರಬೇಕೆಂಬ ಬಗ್ಗೆ ಸಾರ್ವಜನಿಕಾಭಿಪ್ರಾಯ ಸಂಗ್ರಹಕ್ಕಾಗಿ ಅದರಲ್ಲೊಂದು ಪ್ರಶ್ನಮಾಲಿಕೆಯನ್ನು ಕೊಡಲಾಗಿದೆ. ಈ ಪ್ರಶ್ನಮಾಲಿಕೆಗೆ ಮಾರ್ಚ ೩೧ ರೊಳಗೆ ಉತ್ತರ ಬರಬೇಕೆಂದೂ ಅವುಗಳನ್ನು ಪರಿಶೀಲಿಸಿ ಮಹಾರಾಜರಿಗೆ ಸಲಹೆ ಕೊಡಲಾಗುವದೆಂದೂ ಕಾಣಿಸಲ್ಪಟ್ಟಿರುವದಲ್ಲದೆ, ಉತ್ತರದ ವ್ಯಾಪ್ತಿ ಪ್ರಶ್ನೆಗಳಿಗಷ್ಟೇ ಸೀಮಿತವಾಗಿರಬೇಕೆಂಬ ನಿಯಮವಿಲ್ಲೆಂದು ಸಡಿಲು ಧೋರಣ ತೋರಿಸಲಾಗಿದೆ. ಯಾರು ಬೇಕಾದರೂ ಇದಕ್ಕೆ ಉತ್ತರ ಕಳಿಸಬಹುದು.

ಪ್ರಶ್ನಮಾಲಿಕೆಯ ಅಂಶಗಳಿಂತಿವೆ:

೧. ಶಾಸನ ಸಭೆ ಒಂದೇ ಭವನದಿಂದ ಕೂಡಿರಬೇಕೇ ಎರಡಿರಬೇಕೆ ?

೨ (ಅ) ಒಂದೇ ಭವನದಿಂದ ಕೂಡಿದ್ದರೆ ಮತ್ತು (ಬ) ಎರಡು ಭವನಗಳಿಂದ ಕೂಡಿದ್ದರೆ ಪ್ರಜಾಪ್ರತಿನಿಧಿ ಸಭೆಯ ಸ್ಥಾನ ಕರ್ತವ್ಯಗಳೆಂತಿರಬೇಕು.

೩. ಶಾಸನ ಸಭೆಯ ರಚನೆ.

೪. ಚುನಾವಣೆಗಳಲ್ಲಿ ಮತಾಧಿಕಾರ

೫. ಚುನಾವಣೆಯ ವಿಧಾನ.

೬. ಅಲ್ಪಸಂಖ್ಯಾಕರ ಪ್ರಾತಿನಿಧ್ಯ.

೭. ವಿಶೇಷೋದ್ದೇಶಗಳ ಪ್ರಾತಿನಿಧ್ಯ.

೮. ಕಾರ್ಯಕಾರಿ ಖಾತೆ (ಎಗ್ಜಿಕ್ಯೂಟಿವ)ಯ ಸ್ವಭಾವ ಮತ್ತು ಅದಕ್ಕೂ ಶಾಸನ ಖಾತೆಗೂ ಇರಬೇಕಾದ ಸಂಬಂಧ.

೯. ರಕ್ಷಣೆಯ ಸಾಧನಗಳು.

### ಶ್ರೀ ಭಾಷ್ಯಂ ಅವರ ಹೇಳಿಕೆ

ಮೇಲಿನ ಪ್ರಶ್ನಾವಳಿಯಲ್ಲಿ ಮುಂಬರುವ ಸುಧಾರಣೆಗಳಿಗೆ ಏನಾದರೂ ಇತಿಮಿತಿಯಿರುವದೆಂಬ ಕಲ್ಪನೆಗೆ ಎಡೆಯಿಲ್ಲವೇನೋ ನಿಜ. ಆದರೆ ಈ ಪ್ರಶ್ನೆಗಳಿಗೆ ಉತ್ತರವೇನೆಂಬುದು ಸ್ಪಷ್ಟವಾಗಿರುವದರಿಂದ ಈ ಪತ್ರಿಕೆಯ ಅವಶ್ಯಕತೆಯೇ ಇಲ್ಲೆಂದು ಕಾಂಗ್ರೆಸ್ ವರ್ಗಗಳು ವಾದಿಸುತ್ತವೆ. ಹಿಂದಿನ ಮೈಸೂರು ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ ಕೆ. ಟಿ. ಭಾಷ್ಯಂ ಅವರು ಇದೇ ಮಾತು ಹೇಳಿದರು. ಈ ಪ್ರಶ್ನಾವಳಿ ವೇಳೆ ಕಳೆಯುವ ಉಪಾಯವೆಂದು ಅವರ ಅಭಿಪ್ರಾಯ. ಇದಿ ಪ್ರಶ್ನಾವಲಿಯಲ್ಲಿ ಎಲ್ಲಕ್ಕಿಂತ ಮಹತ್ವದ್ದೆಂದರೆ ಶಾಸನ ಸಭೆಗೂ ಕಾರ್ಯಕಾರಿ ಶಾಖೆಗೂ ಇರುವ ಸಂಬಂಧದ ಪ್ರಶ್ನೆ. ಹೊಣೆಗಾರ ಕಾರ್ಯಕಾರಿ ಮಂಡಲ (ಮಂತ್ರಿಮಂಡಲ) ಕ್ಕಿಂತ ಗುಂಜಿ ತೂಕ ಕಡಿಮೆಯಾದುದು ಪ್ರಜೆಗಳಿಗೆ ಗ್ರಾಹ್ಯವಾಗುವದಿಲ್ಲವೆಂದು ಸರಕಾರಕ್ಕೆ ಗೊತ್ತೇ ಇದೆ. ಇದನ್ನು ಪೂರೈಸಿದರೆ ಉಳಿದುದೆಲ್ಲವನ್ನೂ ಗ್ರಾಹ್ಯಮಾಡಿಕೊಳ್ಳಬಹುದು. ಹೀಗೆ ಹೇಳಿ ಶ್ರೀ ಭಾಷ್ಯಂ ಅವರು ಇನ್ನೊಂದು ಪ್ರಚ್ಛನ್ನ ಎಚ್ಚರಿಕೆಯನ್ನು ಕೊಟ್ಟಿದ್ದಾರೆ. ತಾಳ್ಮೆ ಜಾಣತನಗಳಿಂದ ಕೆಲಸ ಸಾಧಿಸದೆ ಸರಕಾರ ದುರಾಗ್ರಹಕ್ಕೆ ಬಿದ್ದರೆ ರಾಜಪ್ರಜೆಗಳಿಬ್ಬರಿಗೂ ದ್ರೋಹ ಬಗೆದಂತಾಗುವದೆಂದೂ ಪ್ರಜೆಗಳು ಒಮ್ಮೆ ಹೋರಾಟ ಪ್ರಾರಂಭಿಸಿದರೆಂದರೆ—ಯೋಗ್ಯ ಘೋಷಣೆ ಬಾರದಿದ್ದರೆ ಪ್ರಾರಂಭಿಸಿಯೇತೀರುವರು—ಮುಂದೆ ಪರಿಸ್ಥಿತಿ ಕೈಮೀರಿ, ಮಹಾರಾಜರ ಕೃಪಾಛತ್ರದಲ್ಲಿ ಹೊಣೆಗಾರ ಸರಕಾರ ಸ್ಥಾಪನೆಗಿಂತಲೂ ಜನರ ಆಕಾಂಕ್ಷೆ ಹೆಚ್ಚಿನ ಪಲ್ಲವಿಗೆ ಏರಬಹುದೆಂದೂ ಅವರು ಹೇಳಿದ್ದಾರೆ.

ಈ ಎಚ್ಚರಿಕೆಯೇನು ಟೊಳ್ಳು ಬೆದರಿಕೆಯಲ್ಲ. ಹಿರಿ ಪಕ್ಷಗಳು "ಮಹಾರಾಜರ ಕೃಪಾಛತ್ರದ ನೆರಳಿನಲ್ಲಿ" ಹೊಣೆಗಾರ ಸರಕಾರವನ್ನು ಸ್ಥಾಪಿಸುವದೇ ಧ್ಯೇಯವೆಂದಿಟ್ಟುಕೊಂಡಿದ್ದರೂ

# ವ್ಯಾಪಾರ ಪ್ರಪಂಚ

## ಮುಂಬಯಿ ಶೇರ ಪೇಟೆ

ಮುಂಬಯಿ ತಾ. ೨೬

ಈ ವಾರ ಶೇರ ಪೇಟೆಯಲ್ಲಿ ಅಧಿಕಾಂಶ ಪಾಲುಗಳ ಬೆಲೆ ಬಹಳ ಕಡಿಮೆ ಪ್ರಮಾಣದಲ್ಲಿ ಏರಿಳಿದರೂ ಅನೇಕ ಪಾಲುಗಳು ಇಂದು ಹೆಚ್ಚಿನ ಸುಧಾರಣೆಯನ್ನು ತೋರಿದವು. ಟಾಟಾ ಸ್ಟೀಲ ಡೆಫರ್ಡ ಪಾಲು ೨೫೬೨-೮-೦ ಯಿಂದ ೨೫೩೧-೪-೦ ಕ್ಕಿಳಿದು ೨೬೦೧-೪-೦ ಗೆ ಸುಧಾರಿಸಿತು. ಮುಂಬಯಿ ಡಾಯಿಂಗ್ ೨೬೧೭-೮-೦ ರಿಂದ ೨೬೩೦-೦-೦ ಕ್ಕೇರಿ ೨೫೯೫-೦-೦ ಕ್ಕಿಳಿದು ೨೬೦೭-೮-೦ ರಲ್ಲಿ ನಿಂತಿತು. ಫಿನ್ಲೆ ೩೬೮-೦-೦ ರಿಂದ ೩೬೩-೦-೦ ಕ್ಕಿಳಿದು ೩೬೬-೦-೦ ಕ್ಕೂ ಕೋಹಿನೂರು ೮೪೫-೦-೦ ರಿಂದ ೮೨೯-೦-೦ ಕ್ಕಿಳಿದು ೮೩೭-೦-೦ ಕ್ಕೂ ಸ್ವದೇಶಿ ೭೫೮-೦-೦ ರಿಂದ ೭೭೦-೦-೦ ಕ್ಕೇರಿ ೭೫೧-೦-೦ ಕ್ಕಿಳಿದು ೭೬೦-೦-೦ ಕ್ಕೂ ಗೋಕಾಕ ೩೫೦-೦-೦ ರಿಂದ ೩೫೭-೦-೦ ಕ್ಕೂ ಏರಿದವು. ಟಾಟಾ ಕೆಮಿಕಲ್ಸ್ ೪೩-೧೦-೦ ರಿಂದ ೪೩-೪-೦ ಕ್ಕಿಳಿದು ೪೪-೬-೦ ಕ್ಕೇರಿತು. ಸಿಂಧ್ಯಾ-ಸ್ಟೀಮ ೩೬-೮-೦ ರಿಂದ ೩೭-೪-೦ ಕ್ಕೂ ಅಸೋಸಿಯೇಟೆಡ ಸಿಮೆಂಟ್ಸ ೨೦೨-೮-೦ ರಿಂದ ೨೦೩-೦-೦ ಕ್ಕೇರಿ ೧೯೮-೮-೦ ಕ್ಕಿಳಿದು ೨೦೧-೮-೦ ಕ್ಕೂ ಸ್ಥಿತ್ಯಂತರ ಹೊಂದಿದವು. ಸೆಂಟ್ರಲ ಬ್ಯಾಂಕ್ ೧೩೩-೮-೦ ರಿಂದ ೧೩೪-೦-೦ ಕ್ಕೇರಿ ೧೨೯-೧೨-೦ ಕ್ಕಿಳಿದು ೧೩೩-೦-೦ ಕ್ಕೂ ಇಂಪೀರಿಯಲ್ ಎಸ್. ಸಿ. ೨೪೭೫-೦-೦ ರಿಂದ ೨೪೫೫ ಕ್ಕಿಳಿದು ೨೪೭೦-೦-೦ ಕ್ಕೂ ರಿಝರ್ವ ೧೩೩-೦-೦ ರಿಂದ ೧೩೧-೮-೦ ಕ್ಕಿಳಿದು ೧೩೨-೮-೦ ಕ್ಕೂ ಬದಲಾದವು. ಸರಕಾರಿ ಸಾಲ ಪತ್ರಗಳ ಬೆಲೆಯೇರಿತು. ಜಿ. ಪಿ. ನೋಟು ೧೦೦-೧೦-೦ ಯಿಂದ ೧೦೨-೭-೦ ಗೇರಿತು.

## ಚಿನ್ನ ಬೆಳ್ಳಿ

ಇಂಗ್ಲಂಡಿನಿಂದ ಬೆಳ್ಳಿ ಬರುವದು ತಡವಾದುದರಿಂದ ತೇಜಿ ವ್ಯಾಪಾರಿಗಳ ಕೈವಾಡ ಇನ್ನೂ ಸಾಗಿದೆ. ೧೫೩-೦-೦ ರಲ್ಲಿದ್ದ ತಯಾರಿ ಬೆಳ್ಳಿ ೧೫೬-೧೪-೦ ಕ್ಕೇರಿದೆ ವಾಯದಾ (ಮಾರ್ಚ) ೧೫೦-೧೪-೦. ಕೆಲ ಬ್ಯಾಂಕುಗಳು ಚಿನ್ನವನ್ನು ಪೇಟೆಗೆ ತಂದಿದ್ದರಿಂದ ಸ್ವಲ್ಪಕಾಲ ಚಿನ್ನ ಇಳಿಮುಖವಾಗಿ ೯೯-೦-೦ ರ ವರೆಗೆ ಬಂದರೂ ಮತ್ತೆ ಕೊಳ್ಳುವವರ ಒತ್ತಡದಿಂದ ೧೦೪-೮-೦ ಗೇರಿತು. ವಾಯದಾ ೯೫-೦-೦.

## ಅರಳೆಪೇಟೆ

ಅರಳೆ ಪೇಟೆಯಲ್ಲಿ ಏನೂ ಉತ್ಸಾಹವಿಲ್ಲ. ಮಾರ್ಚ ವಾಯದೆ ಅಮು. ಸಿ. ಸಿ. ಅರಳೆ ಕನಿಷ್ಠ ನಿಯಂತ್ರಣ ದರಕ್ಕಿಂತ ಹೆಚ್ಚಿಗೆ ಏರುತ್ತಿಲ್ಲ. ಅದು ೪೩೦-೦-೦ ರಲ್ಲಿಯೆ ಬಹಳ ದಿನ ಇದ್ದು ೪೩೨-೧೨-೦ ಕ್ಕೆ ಕೊನೆಗೊಂಡಿತು. ಮೇ ೪೪೬-೦-೦ ಜುಲೈ ೪೫೮-೨-೦ ಸಪ್ಟೆಂಬರ ೪೬೬-೨-೦.

## ಎಣ್ಣೆ ಕಾಳು

| | |
|---|---|
| ಅಗಸಿ | ೨೬-೪-೦ |
| ಅಗಸಿ ಎಣ್ಣೆ | ೧೨-೧೪-೦ |

## ಶಿವಮೊಗ್ಗೆ

ಫೆ. ೨೫

| | | |
|---|---|---|
| ಅಡಿಕೆ ದೇಶಾವರ ನಂ೧ ಮಣ | ೧ಕ್ಕೆ | ೫೦--೫೫ |
| ,, ,, | ೨ | ೪೫-೫೦ |
| ,, ,, | ೩ | ೩೯-೪೦ |
| ಬೆಟ್ಟೆ ವಂತಿ | | ೩೩-೩೫ |
| ಬೆಟ್ಟೆ | | ೨೮-೩೩॥ |
| ಕೊರಸಾಲು | | ೩೮-೪೫ |

## ಸಾಂಗಲಿ ಪೇಟೆ

ತಾ. ೨೫

| | |
|---|---|
| ಅರಿಷಣ ಹೇರು | ೯೬--೧೦೫ |
| ಮೆಣಸಿನಕಾಯಿ ಹೇರು ,, | ೧೫೦-೨೦೦ |
| ಶೇಂಗಾ ಖಂಡಿ | ೧೧೫--೧೧೯ |
| ಮಿರ್ಜ ತಂಬಾಕು ಹೇರು | ೧೨೫-೨೨೫ |
| ತಂಬಾಕ ಪಂಢರಪುರಿ ,, | ೧೭೫-೨೫೦ |
| ತಂಬಾಕು ಅಕೋಳ(ಹೇರು) | ೨೫೦-೩೭೫ |

## ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೭೫-೨೮೦ |
| ,, | ನಂ. ೨ | ೨೬೫-೨೭೦ |
| ,, | ನಂ. ೩ | ೨೬೦-೨೫೫ |
| ಅಪ್ಲಂಡ ಹತ್ತಿ | | ೨೫೦-೨೬೦ |
| ಜಿನ | | ೧೯೬ |
| ಸಾಜಿನ | | ೧೭೦-೧೮೦ |
| ಡಬಲರೋಲ | | ೧೭೫-೧೮೫ |

ಪ್ರಜಾಗಣದಲ್ಲಿ ಹೆಚ್ಚು ಉಗ್ರಸತ್ವಗಳು ಈಗಾಗಲೆ ಪ್ರಜಾರಾಜ್ಯದ ಅಪೇಕ್ಷೆಯ ಬೀಜಗಳನ್ನು ಬಿತ್ತಿವೆಯೆಂಬಲ್ಲಿ ಸಂಶಯವಿಲ್ಲ. ವಿದ್ಯಾರ್ಥಿಗಳಲ್ಲಿ ಈ ಉಗ್ರವಾದಕ್ಕೆ ಬೆಂಬಲದೊರಕುತಿದೆಯೆಂದು ನಂಬಲಾಗಿದೆ. ದಕ್ಷಿಣ ಕನ್ನಡವಿದ್ಯಾರ್ಥಿ ಸಮ್ಮೇಲನದಲ್ಲಿ ಈ "ಅರಸನಿಲ್ಲದ ರಾಜ್ಯ"ದ ಅಪೇಕ್ಷೆಯ ಝುಲಕು ಕೆಲ ಮೈಸೂರು ವಿದ್ಯಾರ್ಥಿ ನಾಯಕರ ಭಾಷಣಗಳಲ್ಲಿ ಕಾಣಬಂದಿತ್ತು. ದೇವದತ್ತ ಅಧಿಕಾರದ ಹಟಕ್ಕೆ ಸಂಸ್ಥಾನಾಧೀಶರು ಬಿದ್ದು ಬಹಿರಂಗವಾಗಿ ಈ ಪ್ರಶ್ನೆಯ ಬಗ್ಗೆ ವಾದವೆಬ್ಬಿಸಿರುವದರಿಂದ ಈ ಕ್ರಾಂತಿಕಾರಿ ಒಲವಿಗೆ ಹೆಚ್ಚು ಪುಷ್ಟಿ ದೊರೆವ ಸಂಭವವಿದೆ.



### ಸೊಂಡೂರು ಮಹಾರಾಜರ ಹೇಳಿಕೆ

ಅರಸರ ದೈವಾಯತ್ತ ಅಧಿಕಾರದ ಪ್ರಶ್ನೆಯನ್ನೆತ್ತಿ ಬೆಂಗಳೂರಲ್ಲಿ ಸೊಂಡೂರು ಮಹಾರಾಜರು ಮಾಡಿದ ಭಾಷಣ ಇತರ ನರೇಂದ್ರರಿಗೆ ಮಾರ್ಗದರ್ಶಕವಾಗಿದೆ. ಅವರು ದೈವಾಯತ್ತ ಅಧಿಕಾರದ ವಾದವನ್ನು ಖಂಡಿಸಿ ಅದು ಹಿಂದೂ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿಲ್ಲೆಂದೂ ಈ ಪ್ರತಿಗಾಮಿ ಕಲ್ಪನೆ ವಿದೇಶಗಳಿಂದ ಬಂದಿದೆಯೆಂದೂ ಸಾರಿದರು. ಹಿಂದೂ ಶಾಸ್ತ್ರಗಳಲ್ಲಿ ಅರಸನ ಕರ್ತವ್ಯಗಳನ್ನೆ ಹೇಳಲಾಗಿದೆಯಲ್ಲದೆ ಅಧಿಕಾರಗಳನ್ನಲ್ಲ. ಅರಸರು ಸರಿಯಾಗಿ ಕರ್ತವ್ಯಪಾಲನೆ ಮಾಡಿದರೆ ಇಂದಿನ ರಕ್ತಪಾತ ನಿಂತು ಹೋಗುವದೆಂದರು.

# ಬೆಂಗಳೂರು-ಮೈಸೂರು

ಮೈಸೂರು ಪ್ರಜಾ ಪ್ರತಿನಿಧಿ ಸಭೆಯ ಕಾಂಗ್ರೆಸ್ ಪಕ್ಷದ ನಾಯಕರಾದ ಶ್ರೀ ಕೆ. ಹನುಮಂತಯ್ಯನವರು ತಮಗೆ ರಾಜದ್ರೋಹಾರೋಪದಿಂದಾದ ಶಿಕ್ಷೆಯ ವಿರುದ್ಧ ಮೇಲರಿಕೆ ಮಾಡಿಕೊಂಡಿದ್ದು ಮಾರ್ಚ ೩ ಕ್ಕೆ ಅದು ವಿಚಾರಣೆಗೆ ಬರುವದು.

ಧರ್ಮರತ್ನಾಕರ ಶ್ರೀ ಬಿ. ಎನ್. ಗೋಪಾಲರಾಯರನ್ನು ದಿವಾಳಿ ಕುಳವೆಂದು ಸಾರಬೇಕಾಗಿ ಮುಖ್ಯ ಜಿಲ್ಹಾ ಜಜ್ಜರ ನ್ಯಾಯಸ್ಥಾನದಲ್ಲಿ ಶ್ರೀ ಎಸ್. ಎನ್. ಗೋಪಾಲರಾಯರು ಹೂಡಿದ ಪ್ರಕರಣವನ್ನು ಮನ್ನಿಸಿ, ನ್ಯಾಯಾಧೀಶರು ಧರ್ಮ ರತ್ನಾಕರರು ಸಾಲಿಗರಿಂದ ಬಂದಿರುವ ಬೇಡಿಕೆಗಳನ್ನು ಪೂರೈಸಲು ತಾವು ಅಸಮರ್ಥರೆಂದೊಪ್ಪಿಕೊಂಡದ್ದರಿಂದ ಅವರನ್ನು ದಿವಾಳಿಯೆಂದು ತೀರ್ಮಾನಿಸಿದ್ದಾರೆ. ಸಾಲಿಗರೆಲ್ಲ ೩ ತಿಂಗಳೊಳಗೆ ತಮ್ಮ ಬೇಡಿಕೆಗಳನು ನ್ಯಾಯಸ್ಥಾನದಲ್ಲಿ ಸಿದ್ಧಗೊಳಿಸಬೇಕೆಂದೂ ಡಿಸ್‌ಚಾರ್ಜ ಬಗ್ಗೆ ಸಾಲಗಾರನು ೬ ತಿಂಗಳೊಳಗೆ ಅರ್ಜಿ ಮಾಡಬೇಕೆಂದೂ ಅಜ್ಞಾಪಿಸಲಾಗಿದೆ. ಶ್ರೀ ಗೋಪಾಲರಾಯರ ಆಸ್ತಿಪಾಸ್ತಿಗಳು ಸರಕಾರಿ ರಿಸೀವರರ ವಶಕ್ಕೊಪ್ಪಿಸಲ್ಪಟ್ಟವೆ.

ಒಂದು ಜೀಪಗಾಡಿ ಹಾಯ್ದುದ್ದರಿಂದ ಬೆಂಗಳೂರ ವಿಶ್ವೇಶ್ವರಯ್ಯರ ಸರ್ಕಲ್ಲಿನಲ್ಲಿ ನಾಗಮ್ಮನೆಂಬ ಚಿಕ್ಕ ಹುಡಿಗೆ ಆಸ್ಪತ್ರೆಯಲ್ಲಿ ಸತ್ತಳು.

# ದಕ್ಷಿಣ ಕನ್ನಡ

ಈ ವರೆಗೆ ರಾಷ್ಟ್ರೀಯ ಸ್ವಯಂಸೇವಕ ಸಂಘ ಮತ್ತು ರಾಷ್ಟ್ರೀಯ ಸೇವಾದಲ ಇವರ ದಕ್ಕೂ ಚಟುವಟಿಕೆ ನಡಿಸಲು ಸ್ಥಳ ಕೊಡುತಿದ್ದ ಮಂಗಳೂರಿನ ಕೆನರಾ ಹಾಯಸ್ಕೂಲ ಅಧಿಕಾರಿಗಳು ತಾ ೨೦ಕ್ಕೆ ಸ್ವಯಂಸೇವಕ ದಲದವರಿಗೆ ಅಪ್ಪಣೆಯನ್ನು ನಿರಾಕರಿಸಿದ್ದರಿಂದ ಕೇಂದ್ರ ಮೈದಾನಿನಲ್ಲಿ ಶ್ರೀ ಎಸ್ ಎಚ್ ಒಡೆಯರವರ ಅಧ್ಯಕ್ಷತೆಯಲ್ಲಿ ಸಭೆಸೇರಿ ಶಾಲಾಧಿಕಾರಿಗಳ ಅರಾಷ್ಟ್ರೀಯ ವರ್ತನೆಯನ್ನು ಖಂಡಿಸಲಾಯಿತು.

ಮದ್ರಾಸಿನ ತಿರುವಲ್ಲಿಕೇಣಿಯ ಉಡುಪಿ ಶ್ರೀಕೃಷ್ಣ ಮಂದಿರದ ಸಂಚಾಲಕರು ತಾ ೩ರಿಂದ ೧೧ರವರೆಗೆ (ಮಾರ್ಚ) ಶ್ರೀ ವಾದಿರಾಜ ಸ್ವಾಮಿಗಳ ಆರಾಧನೋತ್ಸವವನ್ನೇರ್ಪಡಿಸಿದ್ದು ಕನ್ನಡ ಇಂಗ್ಲಿಷ, ತಮಿಳುಗಳಲ್ಲಿ ಪಂಡಿತರ ಉಪನ್ಯಾಸಗಳನ್ನು ಏರ್ಪಡಿಸಿದ್ದಾರೆ.

ಮಂಗಳೂರಿನ ಸೆಂಟ ಅಲೋಸಿಯಸ್ ಕಾಲೇಜಿನ ಪಂಡಿತರೂ ಪ್ರಸಿದ್ಧ ಕನ್ನಡ ವಿದ್ವಾಂಸರೂ ಆದ ಶ್ರೀ ಮುಳಿಯೆ ತಿಮ್ಮಪ್ಪಯ್ಯನವರಿಗೆ "ಕವಿರಾಜ ಮಾರ್ಗ" ಗ್ರಂಥದ ಮೇಲೆ ಬರೆದ ವಿಮರ್ಶೆಯ ಪ್ರಕಟನೆಗಾಗಿ ಆ ಕಾಲೇಜಿನ ಕನ್ನಡ ಸಂಘದ ಸದಸ್ಯರು ರೂ. ೫೫೦ರ ನಿಧಿ ಸಂಗ್ರಹಿಸಿ ತಾ ೧೫ಕ್ಕೆ ಅವರಿಗೊಪ್ಪಿಸಿದರು.

ತಾ ೧೬ಕ್ಕೆ ಕಾರ್ಕಳದ ಬಿಲ್ಲವರ ಸಭೆಸೇರಿ ಸಮಾಜವನ್ನು ಸಂಘಟಿಸಬೇಕೆಂದು ನಿರ್ಧರಿಸಲ್ಪಟ್ಟಿತು.

ಮಂಗಳೂರ ಸೆಂಟ ಅಲೋಸಿಯಸ್ ಕಾಲೇಜಿನ ಕನ್ನಡ ಸಂಘದ ವಾರ್ಷಿಕೋತ್ಸವ ತಾ ೧೫ಕ್ಕೆ ಶ್ರೀ. ಕೆ. ಬಿ. ಜಿನರಾಜ ಹೆಗಡೆಯವರ ಅಧ್ಯಕ್ಷತೆಯಲ್ಲಿ ಜರುಗಿತು. ಏಕೀಕರಣದ ಕನಸು ನನಸಾಗ ತೊಡಗಿದೆಯೆಂದು ಅಧ್ಯಕ್ಷರು ನುಡಿದರು.

ಡಾ. ಈಶ್ವರ ಶರ್ಮರ ಅಧ್ಯಕ್ಷತೆಯಲ್ಲಿ ಪಣಂಬೂರಿಯಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಪ್ರಕಾಶಂ ಮಂತ್ರಿಮಂಡಲದಲ್ಲಿ ವಿಶ್ವಾಸ ಪ್ರದರ್ಶಿಸಲಾಯಿತು. ಶ್ರೀ ಕೆ. ಕೃಷ್ಣರಾವ ಮತ್ತು ಅಚ್ಯುತ ಇವರು ಮಂತ್ರಿಮಂಡಲದ ಸತ್ಕಾರ್ಯಗಳನ್ನು ವಿವರಿಸಿದರು.

ದಕ್ಷಿಣ ಕನ್ನಡ ಜಿಲ್ಹಾ ಕಾಂಗ್ರೆಸ್ ಕಾರ್ಯಸಮಿತಿ ತಾ. ೨೩ಕ್ಕೆ ಶ್ರೀ ಎಚ್ ನಾರಾಯಣರಾಯರ ಅಧ್ಯಕ್ಷತೆಯಲ್ಲಿ ಜರುಗಿ ಜನಹಿತ ಯೋಜನೆಗಳನ್ನು ಕೈಕೊಂಡಿದ್ದ ಪ್ರಕಾಶಂಮಂತ್ರಿಮಂಡಲದ ಮೇಲೆ ಅವಿಶ್ವಾಸ ಗೊತ್ತುವಳಿ ತಂದುದಕ್ಕೆ ವಿಷಾದ ಪ್ರದರ್ಶಿಸಿತು. ಮಂತ್ರಿಮಂಡಲದ ಬಿಕ್ಕಟ್ಟಿನ ನಿವಾರಣೆಗೆ ಯೋಗ್ಯ ಕ್ರಮ ಕೈಕೊಳ್ಳಬೇಕೆಂದು ಕಾಂಗ್ರೆಸ್ ನಾಯಕರನ್ನು ಪ್ರಾರ್ಥಿಸಲಾಯಿತು. ಪಕ್ಷದಲ್ಲಿ ಗುಂಪುಗಳ ಅಸ್ತಿತ್ವವನ್ನು ವಿಚಾರಿಸಲು ಸಮಿತಿ ನೇಮಿಸಬೇಕೆಂಬ ಶ್ರೀ ಪ್ರಕಾಶಂ ಅವರ ವಿಚಾರ ಜಾಣತನದ್ದಲ್ಲವೆಂದೂ ಸಾರಲಾಯಿತು. ಅಂದು ಮಂಗಳೂರಲ್ಲಿ ಸಾರ್ವಜನಿಕ ಸಭೆಯೊಂದು ಶ್ರೀ ಎಂ.ಡಿ ಅಧಿಕಾರಿಗಳ ಅಧ್ಯಕ್ಷತೆಯಲ್ಲಿ ಸೇರಿ ಶ್ರೀ ಪ್ರಕಾಶಂ ಅವರಲ್ಲಿ ಪೂರ್ಣ ವಿಶ್ವಾಸವನ್ನು ಪ್ರದರ್ಶಿಸುವ ಗೊತ್ತುವಳಿಯನ್ನು ಸರ್ವಾನುಮತಿಯಿಂದ ಅಂಗೀಕರಿಸಲಾಯಿತು.

ಶ್ರೀ ಎಸ್. ಇ. ಸೆಲ್ವಂ ಅವರ ಅಧ್ಯಕ್ಷತೆಯಲ್ಲಿ ಕೇರಳದ ಕಾಂಗ್ರೆಸ್ ನಾಯಕರಾದ ಈ ಮೊಯಿನ್ನೊಲ್ವಿಗಳು ಉದ್ಘಾಟನ ಮಾಡಿದ ಕಾಸರಗೋಡು ತಾಲೂಕು ಖಾಸಗಿ ಪ್ರಾಥಮಿಕ ಶಾಲಾಧ್ಯಾಪಕರ ೪ನೇ ಸಮ್ಮೇಲನ (ನೀಲೇಶ್ವರ) ದಲ್ಲಿ ಪ್ರಾಥಮಿಕ ಶಾಲೆಗಳನ್ನೆಲ್ಲ ಸರಕಾರವೇ ನಡೆಸಬೇಕು. ಅಧ್ಯಾಪಕರ ಕನಿಷ್ಠ ಸಂಬಳ ರೂ. ೫೦ ಇಡಬೇಕು. ರಜಾ ನಿಯಮಗಳು ಬದಲಾಗಬೇಕು. ಮೊದಲಾದ ಬೇಡಿಕೆಗಳನ್ನೊಳಗೊಂಡ ಗೊತ್ತುವಳಿಯಾಗಿ ಈ ಬೇಡಿಕೆಗಳಿಗೆ ಮನ್ನಣೆ ದೊರೆಯದಿದ್ದರೆ ಪ್ರತ್ಯಕ್ಷ ಹೋರಾಟವನ್ನು ಮಾರ್ಚ ೩೧ರೊಳಗೆ ಪ್ರಾರಂಭಿಸಲು ದ. ಭಾ. ಅಧ್ಯಾಪಕ ಸಂಘವನ್ನು ಕೇಳಿಕೊಳ್ಳಲಾಯಿತು.

# ಮುಂಬಯಿ ಮುಂಗಡ ಪತ್ರಿಕೆಯಲ್ಲಿ ೬ ಲಕ್ಷ ರೂ ಉಳಿತಾಯ

## ೧೯೫೦ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆ

## ದಡ್ಡಿ ಯೋಜನೆಗೆ ಸರಕಾರದ ಮನ್ನಣೆ

ಮುಂಬಯಿ ಸರಕಾರದ ಅರ್ಥಸಚಿವರಾದ ಶ್ರೀ ವೈಕುಂಠಲಾಲ ಮೆಹತಾರವರು ತಮ್ಮ ಮೊದಲನೆಯ ಆಯುವ್ಯಯ ಪತ್ರಿಕೆಯನ್ನು ೨೪ ನೆ ತಾರೀಕು ಶಾಸನ ಸಭೆಯಲ್ಲಿ ಮುಂದಿಸಿದರು. ಕಳೆದ ಸಲ ಗವರ್ನರ ಸಲಹೆಗಾರ ಸರಕಾರ ಸಿದ್ಧಪಡಿಸಿದ ಅಂದಾಜ ಪತ್ರಿಕೆಯಲ್ಲಿ ಕೆಲವು ತಿದ್ದುಪಡಿ ಮಾತ್ರ ಅರ್ಥಸಚಿವರು ಮಾಡಿದ್ದರಿಂದ ಈ ಸಲದ ಆಯುವ್ಯಯ ಪತ್ರಿಕೆಯು ಕಾಂಗ್ರೆಸ್ ಸರಕಾರದ ಮೊದಲನೆ ಆಯುವ್ಯಯ ಪತ್ರಿಕೆಯೆಂದು ಹೇಳಬಹುದು. ಶ್ರೀ ವೈಕುಂಠಲಾಲ ಮೆಹತಾರವರು ಅರ್ಥಶಾಸ್ತ್ರವನ್ನು ಆಳವಾಗಿ ಅಭ್ಯಾಸ ಮಾಡಿದವರು ಪ್ರಾಂತದ ಸಹಕಾರಿ ಬ್ಯಾಂಕಿನ ಚಾಲಕರೆಂದು ಕೆಲಸಮಾಡಿ ಅನುಭವ ಪಡೆದವರಿದ್ದುದರಿಂದ ಪ್ರಾಂತದ ಆರ್ಥಿಕ ಪರಿಸ್ಥಿತಿಯನ್ನನುಲಕ್ಷಿಸಿ ತಮ್ಮ ಆಯುವ್ಯಯ ಪತ್ರಿಕೆಯನ್ನು ಸಿದ್ಧಪಡಿಸಿರುವರು.

### ಯುದ್ಧೋತ್ತರ ಯೋಜನೆಗಳು

ಯುದ್ಧೋತ್ತರ ಯೋಜನೆಯು ಕಾಲವಿದಾದ್ದರಿಂದ ಆ ಯೋಜನೆಗಳ ಬಗ್ಗೆ ಸ್ವತಂತ್ರ ಪುಸ್ತಕವನ್ನೆ ಅರ್ಥಸಚಿವರು ಸಿದ್ಧಮಾಡಿ ವಿವರಗಳನ್ನೆಲ್ಲ ತಿಳಿಸಿದ್ದಾರೆ. ಈ ಸಲದ ಮುಂಗಡ ಪತ್ರಿಕೆಯ ವೈಶಿಷ್ಟ್ಯವಿದು. ಕಳೆದ ಸಲದ ಲೆಕ್ಕದ ಮೇಲಿಂದ ಅಂದಾಜಿಗಿಂತ ೪೪ ಲಕ್ಷ ರೂಪಾಯಿ ಹೆಚ್ಚು ಉಳಿತಾಯವಾಗಿದೆ. ಮೊದಲು ಕೇವಲ ೭.೨೪ ಲಕ್ಷ ಉಳಿತಾಯವಾಗಬಹುದೆಂದು ಅಂದಾಜಿತ್ತು. ಕಾಂಗ್ರೆಸ್ಸು ಅಧಿಕಾರದಲ್ಲಿ ಬಂದ ಬಳಿಕ ಕಳೆದ ವರುಷ ಬೇರೆ ಬೇರೆ ಖಾತೆಗಳ ವೆಚ್ಚಕ್ಕಾಗಿ ೫೬೮.೮೮ ಲಕ್ಷ ರೂಪಾಯಿಗಳ ಹೆಚ್ಚಿನ ಹಣವನ್ನು ಮಂಜೂರ ಮಾಡಲಾಗಿತ್ತು. ಹೀಗಿದ್ದರೂ ೮ ತಿಂಗಳುಗಳ ಆಯದ ಅಂಕಿಗಳ ಮೇಲಿಂದ ವ್ಯಯಕ್ಕಿಂತ ಆಯ ಹೆಚ್ಚಾಗಿ ಉಳಿತಾಯವಾಗುವದೆಂದು ಅಭಿಪ್ರಾಯ. ಮುಂದಿನ ವರ್ಷದ ಆಯ ೩೮೯೧.೨೬ ಲಕ್ಷ ರೂಪಾಯಿ ಇದ್ದು ವ್ಯಯ ೩೮೦೫.೩೩ ಲಕ್ಷ ಅಂದಾಜು. ಉಳಿತಾಯ ೫.೯೩ ಲಕ್ಷ ರೂಪಾಯಿ ಇದೆ. ಈ ಸಲ ಪ್ರಾಪ್ತಿಯ ಮೇಲಿನ ಕರದ ಪಾಲಿನ ಹೆಚ್ಚಳ ೧೬೧ ಲಕ್ಷ ರೂಪಾಯಿ ಆಗಬಹುದು. ಅಬಕಾರಿ ಉತ್ಪನ್ನ ೪೦ ಲಕ್ಷ ರೂಪಾಯಿ ಹೆಚ್ಚಬಹುದು. ಈ ಕರವನ್ನು ಹೆಚ್ಚಿಗೆ ಮಾಡಿದ್ದರಿಂದ ಉತ್ಪನ್ನ ಹೆಚ್ಚಾಗುವದು ಅಲ್ಲದೆ ಹಿಂದುಸ್ತಾನ ಸರಕಾರದಿಂದಲೂ ಯುದ್ಧೋತ್ತರ ಪುನರ್ರಚನೆಗಾಗಿ ೨ ಕೋಟಿ ರೂಪಾಯಿಗಳು ಸಿಕ್ಕುವವು.

ವೆಚ್ಚದ ವಿವರಗಳಲ್ಲಿ ಈ ವರ್ಷ ಶಿಕ್ಷಣಕ್ಕೆ ಹೆಚ್ಚು ಮಹತ್ವದ ಸ್ಥಾನ ದೊರೆತಿದೆ. ಶಿಕ್ಷಣಕ್ಕೆ ೦.೩೦ ಲಕ್ಷ ವೈದ್ಯಕೀಯ ಹಾಗು ಸಾರ್ವಜನಿಕ ಆರೋಗ್ಯಕ್ಕೆ ೨೫೦.೯೯ ಲಕ್ಷ, ನೀರಾವರಿಗೆ ೫೪.೪೭ ರೂ ಒಕ್ಕಲತನ ಗ್ರಾಮೋದ್ಧಾರ ಸಹಕಾರಗಳನ್ನೊಳಗೊಂಡು ಸಾಮಾನ್ಯ ಆಡಳಿತೆಗೆ ೩೫೯.೬೧ ಲಕ್ಷ ಪೋಲೀಸ ಹಾಗು ಜೇಲುಗಳಿಗೆ ೫೩೪-೫೦ ಲಕ್ಷ ರೂಪಾಯಿ ಹಿಡಿದಿದ್ದು ಶಿಕ್ಷಣ ಸಂಬಂಧದಲ್ಲಿ ಕಳೆದ ವರ್ಷಕ್ಕಿಂತ ೨ ಕೋಟಿ ರೂಪಾಯಿ ಹೆಚ್ಚಿಗೆ ಹಿಡಿಯಲಾಗಿದೆ. ಮೂಲವೆಚ್ಚದ ಸಂಬಂಧದಲ್ಲಿ ವಸತಿ ನಿರ್ಮಾಣ ಮೊದಲಾದ ಯುದ್ಧೋತ್ತರ ಯೋಜನೆಗಳಿಗಾಗಿ ೬ ಕೋಟಿ ರೂಪಾಯಿಗಳ ವ್ಯವಸ್ಥೆ ಮಾಡಲಾಗಿದೆ. ಸರಕಾರಿ ಶಿಲ್ಕಿನಿಂದ ಈ ಹಣ ತೆಗೆದುಕೊಳ್ಳಲಾಗುವದು. ಆಹಾರ ಧಾನ್ಯಗಳ ಖರೀದಿಗಾಗಿ ಈಗ ಅದರಿಂದಲೆ ಹಣ ತೆಗೆದುಕೊಳ್ಳಲಾಗಿದೆ. ಯುದ್ಧೋತ್ತರ ಪುನರ್ರಚನೆಯ ನಿಧಿ ೧೨॥ ಕೋಟಿ ರೂ. ಇದ್ದು ಸದ್ಯದ ವರ್ಷದಲ್ಲಿ ಅದಕ್ಕೆ ೧॥ ಕೋಟಿ ರೂಪಾಯಿ ಕೂಡಿಸುವ ಆಸೆಯಿದೆ. ಮುಂದಿನ ವರುಷದ ಮುಂಗಡ ಪತ್ರಿಕೆಯಲ್ಲಿ ಹಿಂದುಸ್ತಾನ ಸರಕಾರದ ೨ ಕೋಟಿ ಒಳಗೊಂಡು ೩ ಕೋಟಿ ರೂಪಾಯಿ ವರ್ಗಾಯಿಸಲಾಗುವದು. ಹೀಗೆ ಅದು ಒಟ್ಟಿಗೆ ೧೭ ಕೋಟಿ ರೂ. ಆಗುವದು. ಹಿಂದಿನ ಸರಕಾರದವರು ೬೦ ಕೋಟಿ ರೂಪಾಯಿಗಳ ಪಂಚ



(ವೈಕುಂಠಲಾಲ ಮೆಹತಾರವರು)

ವಾರ್ಷಿಕ ಕಾರ್ಯಕ್ರಮ ಸಿದ್ಧಪಡಿಸಿದ್ದರು. ಆದರೀಗ ೯೦ ಕೋಟಿ ರೂಪಾಯಿಗಳ ಪಂಚವಾರ್ಷಿಕ ಕಾರ್ಯಕ್ರಮ ಸಿದ್ಧಪಡಿಸಲಾಗಿದೆಂದೂ ಎರಡು ಯೋಜನೆಗಳಲ್ಲಿ ಮುಖ್ಯ ಬದಲಾವಣೆ ಈ ಮನೋಪ್ರವೃತ್ತಿಯಿಂದ ಇದೆಂದೂ ಅರ್ಥಸಚಿವರು ಹೇಳಿರುವರು. ಸರಕಾರಿ ನೌಕರರ ಸಂಬಳ ಹೆಚ್ಚಿಸಿದ್ದರಿಂದ ೧ ಕೋಟಿ ರೂಪಾಯಿ ಹೆಚ್ಚು ವೆಚ್ಚ ಬರುವದು. ಬರಗಾಲ ನಿವಾರಣೆಗಾಗಿ ೧೯೪೬—೪೭ ರಲ್ಲಿ ೧೪೭ ಲಕ್ಷ ರೂ. ವೆಚ್ಚವಾದವು. ೧೯೪೭—೪೮ ರಲ್ಲಿ ಈ ವೆಚ್ಚ ಕೇವಲ ೧೨ ಲಕ್ಷ ರೂಪಾಯಿ ಆಗುವದೆಂದೂ ಅಂದಾಜ ಮಾಡಲಾಗಿದೆ. ಮುಂಬಯಿ ಮತ್ತು ಪುಣೆ ನಗರಗಳಲ್ಲಿ ಹಾನಿ ಸಹಿಸಿ ಹಾಲು ಮಾರುವದನ್ನು ನಿಲ್ಲಿಸಿದ್ದರಿಂದ ೧೨೫ ಲಕ್ಷ ರೂಪಾಯಿಗಳ ಉಳಿತಾಯವಾಗುವದು.

### ಕರ್ನಾಟಕದಲ್ಲಿ

ಈ ಅಂದಾಜ ಪತ್ರಿಕೆಯಲ್ಲಿ ಕರ್ನಾಟಕದ ಯೋಜನೆಗಾಗಿಯೂ ಹೆಚ್ಚು ಹಣವನ್ನು ತೆಗೆದಿಟ್ಟಿದ್ದು ಸಂತೋಷದ ಸಂಗತಿ. ೧೯೫೦ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪಿಸುವ ಏರ್ಪಾಡು ಮಾಡಿದ್ದು ಅದಕ್ಕಾಗಿ ೮ ಲಕ್ಷ ರೂಪಾಯಿ ಅನಾವರ್ತ ಮತ್ತು ವರ್ಷಕ್ಕೆ ೪ ಲಕ್ಷ ರೂಪಾಯಿ ಆವರ್ತ ವೆಚ್ಚದ ಏರ್ಪಾಡು ಮಾಡಲಾಗಿದೆ. ಒಕ್ಕಲತನದ ಕಾಲೇಜು ಧಾರವಾಡದಲ್ಲಿ ಇದೇ ಮೇ ೧೫ ರಿಂದ ಸ್ಥಾಪಿತವಾಗಲಿದ್ದು ಕಾಲೇಜಿನ ಸ್ವತಂತ್ರ ಕಟ್ಟಡದಾಗುವ ವರೆಗೆ ಕರ್ನಾಟಕ ಕಾಲೇಜಿನಲ್ಲಿಯೇ ನಡೆಸಲಾಗುವದು. ಕಾಲೇಜ ಕಟ್ಟಡಕ್ಕಾಗಿ ಪುಣೆ ಬೆಂಗಳೂರು ರಸ್ತೆಯ ಮೇಲೆ ನರೇಂದ್ರದಲ್ಲಿ ಸ್ಥಳ ಆರಿಸಿದ್ದು ೨ ವರ್ಷಗಳಲ್ಲಿ ಕಟ್ಟಡ ಸಿದ್ಧವಾಗುವದು. ಖಾಸಗಿ ಎಂಜಿನಿಯರಿಂಗ ಕಾಲೇಜಿಗೆ ೫೦ ಸಾವಿರ ರೂಪಾಯಿ ಸಹಾಯ ಮಾಡುವ ಏರ್ಪಾಡು ಮಾಡಲಾಗಿದೆ.

ದಡ್ಡಿ ಹತ್ತರ ಘಟಪ್ರಭಾ ನದಿಗೆ ಒಡ್ಡು ಹಾಕುವ ಸಂಬಂಧದ ಹೆಚ್ಚಿನ ಪರಿಶೀಲನೆ ನಡೆಸಲು ಈ ವರ್ಷ ಒಂದು ಲಕ್ಷ ರೂ. ವೆಚ್ಚ ಮಾಡಲಾಗುವದು. ೯ ಕೋಟಿ ರೂಪಾಯಿ ಈ ಯೋಜನೆಗೆ ಹತ್ತುತಿದ್ದು ೧॥ ಲಕ್ಷ ಎಕರೆಗಳಿಗೆ ನೀರು ಸಿಕ್ಕುವವು. ಧಾರವಾಡ, ಹುಬ್ಬಳ್ಳಿಗಳಿಗೆ ಕುಡಿಯುವ ನೀರಿನ ಸಲುವಾಗಿ ನೀರಸಾಗರ ಯೋಜನೆಗೆ ೧೦ ಲಕ್ಷ ರೂ. ತೆಗೆದಿಡಲಾಗಿದೆ. ೧೦೦೦ ಕ್ಕಿಂತ ಹೆಚ್ಚು ಜನಸಂಖ್ಯೆಯುಳ್ಳ ಪ್ರತಿ ಹಳ್ಳಿಯಲ್ಲಿ ಶಾಲೆಯನ್ನು ಸ್ಥಾಪಿಸಿ ಒತ್ತಾಯದ ಶಿಕ್ಷಣ ಜಾರಿಯಲ್ಲಿ ತರಲಾಗುವದು. ಗ್ರಂಥಾಲಯ ಚಳವಳಿಯಲ್ಲಿ ಕರ್ನಾಟಕಕ್ಕೊಂದು ಪ್ರತ್ಯೇಕ ಪ್ರಾದೇಶಿಕ ಗ್ರಂಥಾಲಯ ದೊರೆವುದು. ೨೦೦ ಜನ ವಸತಿಯುಳ್ಳ ಹಳ್ಳಿಗೆ ಕುಡಿಯುವ ನೀರಿನ ಬಾವಿಯ ಯೋಜನೆ ಮಾಡಲಾಗುವದು. ಧಾರವಾಡ ಕಾರವಾರ ಜಿಲ್ಹೆಗಳಲ್ಲಿ ಪ್ಲೇಗು ನಿವಾರಣೆಗಾಗಿ ಪ್ರತ್ಯೇಕ ಸಂಸ್ಥೆಯನ್ನು ಸ್ಥಾಪಿಸಲಾಗುವದು. ಉತ್ತರ ಕನ್ನಡ ಜಿಲ್ಹೆಯಲ್ಲಿ ಜೇನು ಸಾಕುವ ಉದ್ಯೋಗವನ್ನು ಬೆಳೆಸಲಾಗುವದು ಮೀನಗಾರಿಕೆಯ ಉದ್ಯೋಗಾಭಿವೃದ್ಧಿಗಾಗಿ ಹಣ ತೆಗೆದಿಡಲಾಗಿದೆ. ಮಾಚಾಳಿಯಲ್ಲಿ ಮೀನಗಾರಿಕೆ ಸಾಲೆಯನ್ನು ತೆರೆಯಲಾಗುವದು.

ಹುಬ್ಬಳ್ಳಿಯಲ್ಲಿ ಕೂಲಿಕಾರರಿಗಾಗಿ ಹಿತರಕ್ಷಣೆ ಕೇಂದ್ರ ತೆರೆಯಲಾಗುವದು. ಮತ್ತು ಪ್ರವಾಸಿಕರ ಒಂದು ಬಂಗಲೆಯನ್ನು ಬೆಳಗಾವಿಯಲ್ಲಿ ಕಟ್ಟಿಸಲಾಗುವದು. ವಿಜಾಪೂರ ಹುಬ್ಬಳ್ಳಿಗಳಲ್ಲಿ ಪ್ರತ್ಯೇಕವಾಗಿ ಪ್ರಾಂತಿಕ ಶಾಲೆಗಳನ್ನು ಹೊರಡಿಸಲಾಗುವದು.

# ಮುಸ್ಲಿಂ ಲೀಗಿಗೆ ಪಂ. ಜವಾಹರರ ಕರೆ

( ೪ ನೇ ಪುಟದಿಂದ ಬಂದುದು )

ಲಾರ್ಡರಾದ ಸಾಮ್ಯುಯೆಲ್ಲರು ಗೊತ್ತುವಳಿಯನ್ನು ವಿರೋಧಿಸಿ ಸರಕಾರಕ್ಕೆ ಹೀಗೆ ಮಾಡುವದು ಹೊರತು ಬೇರೆ ಉಪಾಯವೇ ಇಲ್ಲವೆಂದು ಸಾರಿದರು. ಲಾರ್ಡ ಪೆಥಿಕ ಲಾರೆನ್ಸರು ಉತ್ತರದಲ್ಲಿ ಹಿಂದುಸ್ತಾನದಲ್ಲಿರುವ ಉಚ್ಚ ಅಧಿಕಾರಿಗಳು ೧೯೪೮ ಜೂನದ ನಂತರ ಹಿಂದುಸ್ತಾನವನ್ನಾಳುವದು ಬ್ರಿಟಿಶರಿಗೆಸಾಧ್ಯವಿಲ್ಲೆಂದು ಸಲಹೆ ಕೊಟ್ಟದ್ದರಿಂದಲೇ ಆ ಅವಧಿಯನ್ನು ಗೊತ್ತುಮಾಡಿದೆಯೆಂದು ಹೇಳಿದರು. ಅಲ್ಪಸಂಖ್ಯಾಕರ ಬಗ್ಗೆ ಘಟನಾ ಸಮಿತಿಯಲ್ಲಿ ಮಾಡಿದ ವ್ಯವಸ್ಥೆ ಮತ್ತು ಘೋಷಣೆಯಲ್ಲಿರುವ ಪಾಕಿಸ್ತಾನದ ಬೀಜ ಇವು ಹೊರತು ಮಹತ್ವದ್ದೇನನ್ನೂ ಅವರು ಹೊರಗೆಡಹಲಿಲ್ಲ. ಹಿಂದುಸ್ತಾನದಲ್ಲಿ ಬ್ರಿಟಿಶ ಸೈನ್ಯದ ಭವಿತವ್ಯದ ಬಗ್ಗೆ ಚುಚ್ಚಿ ಕೇಳಿದರೂ ಅವರೇನೂ ಹೇಳಲಿಲ್ಲ ಆದರೆ ಮುಖ್ಯಮಂತ್ರಿ ಅಟ್ಲಿಯವರು ಹೊರಡಿಸಿದಹೇಳಿಕೆಯೊಂದರಲ್ಲಿ ೧೯೪೮ರ ಜೂನ ನಂತರ ಹಿಂದುಸ್ತಾನದ ಸಂರಕ್ಷಣೆಯ ಭಾರ ಹಿಂದೀಯರದೇ ಎಂದು ಸಾರಿದರು. ಇದರಿಂದ ಬ್ರಿಟಿಶ ಸೈನ್ಯ ಪೂರ್ತಿ ತೆರವು ಮಾಡಲ್ಪಡುವದೆಂದು ಖಚಿತವಾಯಿತು. ಟೆಂಪಲ್‌ವುಡ್ಡರ ಗೊತ್ತುವಳಿಯನ್ನು ಮತಕ್ಕೆ ಹಾಕಿದ್ದರೆ ಅದು ಪಾಸಾಗಿ ಸರಕಾರಕ್ಕೆ ತೊಂದರೆಯಾಗುತಿತ್ತು. ಆದರೆ ಗೊತ್ತುವಳಿ ಹಿಂತೆಗೆದುಕೊಳ್ಳಲ್ಪಟ್ಟದ್ದರಿಂದ ಮಂತ್ರಿಗಳ ಬಾಯಿ ಬಡಿಸುವದಷ್ಟೆ ಟೋರಿಗಳ ಧ್ಯೇಯವಾಗಿತ್ತೆಂದು ತೋರುತ್ತಿದೆ.

### ಮುಂದಿನ ಹೆಜ್ಜೆ

ಮುಂದಿನ ಹೆಜ್ಜೆ ಯೆಂತಿರಬಹುದೆಂಬ ಬಗ್ಗೆಯೂ ಲಾರ್ಡ ವೇವೆಲ್ಲರ ಹೊರ ಪಯಣದ ಕಾರ್ಯದ ಬಗ್ಗೆಯೂ ನಾನಾ ಊಹಾಪೋಹಗಳು ನಡೆದಿವೆ. ವೇವೆಲ್ಲರ ನಿವೃತ್ತಿಗೆ ಮಂತ್ರಿಮಂಡಲದೊಡನೆ ಅವರಿಗಾದ ಭಿನ್ನಾಭಿಪ್ರಾಯವೇ ಕಾರಣವೆಂಬಲ್ಲಿ ಸಂಶಯವಿಲ್ಲ. ಜವಾಹರರು ಅವರನ್ನು ಕಿತ್ತು ಹಾಕಲು ಒತ್ತಾಯಪಡಿಸಿದರು ಎಂಬ ಸುದ್ದಿ ಹಬ್ಬಿದ್ದರೂ ಅದರಲ್ಲಿ ಹುರುಳಿಲ್ಲ. ಹದಿನೈದು ತಿಂಗಳಲ್ಲಿ ಹಿಂದುಸ್ತಾನದಿಂದ ಹೊರಬೀಳುವದು ಸಾಧ್ಯವೆಂದು ವೇವೆಲ್ಲರಿಗೆ ಮನವರಿಕೆಯಾಗಲಿಲ್ಲೆಂದೂ ಅದು ಗಂಡಾಂತರದ್ದೆಂದು ಅವರು ಭಾವಿಸಿದ್ದರಿಂದ ಹೊಣೆ ಹೊರಲು ಸಿದ್ಧರಾಗಲಿಲ್ಲೆಂದೂ ನಂಬಬಹುದು. ಹೊಸ ವಾಯಸರಾಯರು ಹಿಂದೀಯರ ಕೈಗೆ ಅಧಿಕಾರ ಒಪ್ಪಿಸುವ ಕೆಲಸವನ್ನು ಮಾಡಲು ಬರುವರು, ಲೀಗನ್ನು ಘಟನಾಸಮಿತಿಯಲ್ಲಿ ಪ್ರವೇಶಗೊಳಿಸಲು ಅವರು ಸರ್ವ ಪ್ರಯತ್ನ ಮಾಡಬೇಕೆಂದೂ ಆದಾಗದಿದ್ದರೆ ಲೀಗ ಮಂತ್ರಿಗಳನ್ನು ತಳ್ಳಬಹುದೆಂದೂ ಅವರಿಗೆ ಅಪ್ಪಣೆ ಕೊಡಲಾಗಿದೆಯೆಂಬ ಸುದ್ದಿಯಲ್ಲಿ ತಿರುಳೆಷ್ಟು ಜೊಳ್ಳೆಷ್ಟೋ ಗೊತ್ತಿಲ್ಲ ಆದರೆ ಮ್ಯಾಂಚೆಸ್ಟರ್ ಗಾರ್ಡಿಯನ್‌ದಂಥ ಪ್ರಭಾವಿ ಪತ್ರಿಕೆ ಲೀಗ್ ಕಾಂಗ್ರೆಸ್ ಒಡಂಬಡಿಕೆಯಾಗದಿದ್ದರೆ ಕಾಂಗ್ರೆಸಿಗೇ ಅಧಿಕಾರ ಕೊಡಬೇಕು, ಹಿಂದುಸ್ತಾನವನ್ನು ವಿಚ್ಛೇದಿಸತಕ್ಕದ್ದಲ್ಲವೆಂದು ಬರೆದಿದೆಯೆಂದು ಮೇಲೆ ಅಧಿಕಾರ ದಾನದ ಕಾಲಕ್ಕಾದರೂ ಪರಿಸ್ಥಿತಿಯ ಅರಿವು ಬಂದ ಹಲಕೆಲವರು ಇಂಗ್ಲಂಡಿನಲ್ಲಿರುವರೆಂದಾಯಿತು. ಹಿಂದೀ ಮುಂದಾಳುಗಳೇ ಅಂಥ ಪರಿಸ್ಥಿತಿಯನ್ನು ತಂದೊಡ್ಡಿದಲ್ಲದೆ ಹಿಂದುಸ್ತಾನವನ್ನು ವಿಚ್ಛೇದಿಸುವದಿಲ್ಲವೆಂದು ಬ್ರಿಟಿಶ ಮುಖ್ಯ ಮಂತ್ರಿಗಳು ನಿರ್ಧಾರ ಮಾಡಿದ್ದು ಸರಾಗವಾಗಿ ಅಧಿಕಾರ ದಾನ ಮಾಡುವದನ್ನು ಸಾಧ್ಯಗೊಳಿಸಲು ಅವರು ಸ್ವತಃ ಹಿಂದುಸ್ತಾನಕ್ಕೆ ಬರಬಹುದೆಂದೂ ಸುದ್ದಿಯುಂಟಾಗಿದೆ.

# ಪಂಜಾಬ ಸರಕಾರ ಮತ್ತು ಮುಸ್ಲಿಂಲೀಗಿನಲ್ಲಿ ಒಡಂಬಡಿಕೆ

ಪಂಜಾಬ ಸರಕಾರ ಮತ್ತು ಅಖಿಲ ಮುಸ್ಲಿಂ ಲೀಗಿನಲ್ಲಿ ಒಡಂಬಡಿಕೆಯಾಗಿ ಕಳೆದ ೩೪ ದಿನಗಳಿಂದ ನಡೆದ ಲೀಗಿನ ಕಾಯದೆ ಭಂಗ ಚಳವಳಿ ಹಿಂತೆಗೆದುಕೊಳ್ಳಲ್ಪಟ್ಟಿತು. ಈ ಚಳವಳಿಯಲ್ಲಿ ಸೆರೆಹಿಡಿಯಲ್ಪಟ್ಟ ಲೀಗ ಕಾರ್ಯಕರ್ತರನ್ನೆಲ್ಲ ಬಿಡುಗಡೆ ಮಾಡಲಾಗುವದು. ಒಪ್ಪಂದದ ಕರಾರುಗಳಿಂತಿವೆ. ೧) ಸಾರ್ವಜನಿಕ ಸಭೆಯ ಮೇಲಿನ ನಿರ್ಬಂಧ ತೆಗೆದು ಹಾಕಬೇಕು. ೨) ಪಂಜಾಬ ಸಾರ್ವಜನಿಕ ಸುರಕ್ಷಿತತೆಯ ಆರ್ಡಿನನ್ಸ ಬದಲು ಪ್ರಾಂತದಲ್ಲಿ ಶಾಂತತೆಯನ್ನು ಕಾಯ್ದುಕೊಳ್ಳಲು ಅವಶ್ಯವಿರುವ ಕಾಯದೆಗಳನ್ನು ಮಾಡಬೇಕು. ೩) ಪಿನಲ್‌ಕೋಡಿನ ೩೨೫ ಕಲಮಿನನ್ವಯ ಅಂದರೆ ಗಂಭೀರ ಗಾಯಗೊಳಿಸಿದ ಆರೋಪಗಳಿಗಾಗಿ ಶಿಕ್ಷೆಗೊಳಗಾದವರನ್ನು ಬಿಟ್ಟು ಈ ಚಳವಳಿಯಲ್ಲಿ ಭಾಗವಹಿಸಿದವರನ್ನೆಲ್ಲ ಬಿಡುಗಡೆ ಮಾಡಲಾಗುವದು. ೪) ಮೆರವಣಿಗೆಗಳ ಮೇಲಿನ ನಿರ್ಬಂಧ ಉಳಿಯುವದು.

ಮುಖ್ಯ ಮಂತ್ರಿಗಳು ಈ ಸಂಬಂಧದಲ್ಲಿ ಪ್ರಕಟನೆ ಹೊರಡಿಸಿ ವಿರೋಧಿಗಳ ರಾಜಕೀಯ ಚಟುವಟಿಕೆಗಳನ್ನು ಹತ್ತಿಕ್ಕುವುದು ತಮ್ಮ ಉದ್ದೇಶವಾಗಿಲ್ಲೆಂದು ಸ್ಪಷ್ಟಪಡಿಸಿದ್ದಾರೆ. ವಿರೋಧಿಗಳು ಘಟನಾತ್ಮಕ ಉಪಾಯಗಳನ್ನು ಕೈಕೊಳ್ಳಬೇಕೆಂದು ನೆನೆಸು ನಮ್ಮ ಕೈಯಲ್ಲಿದ್ದುದನ್ನು ಮಾಡಿರುವೆವು. ಎಲ್ಲ ನಿರ್ಬಂಧಗಳನ್ನು ಕಿತ್ತಿ ಹಾಕುವದು ಸಾಧ್ಯವಿಲ್ಲ. ಉದಾಹರಣೆಗಾಗಿ ಸೈನಿಕ ಪದ್ಧತಿಯ ಕವಾಯಿತು, ಶಸ್ತ್ರಾಸ್ತ್ರ ಧಾರಣ ಮೇಲಿನ ನಿರ್ಬಂಧಗಳನ್ನು ಸಡಲಿಸದಿರಲಾರೆವು. ಮೆರವಣಿಗೆಗಳ ಮೇಲಿನ ನಿರ್ಬಂಧಗಳ ಬಗ್ಗೆ ಕೂಡ ವಿಚಾರ ಮಾಡಿ ಜಿಲ್ಹಾ ಮ್ಯಾಜಿಸ್ಟ್ರೇಟರು ಅವಶ್ಯವೆಂದು ಹೇಳುವ ವರೆಗೆ ಅವುಗಳ ಮೇಲಿನ ನಿರ್ಬಂಧ ಉಳಿಯುವದು. ಸಾರ್ವಜನಿಕ ನೆಮ್ಮದಿಯನ್ನು ಅನುಲಕ್ಷಿಸಿ ಸಭೆಗಳನ್ನು ನಿರ್ಬಂಧಿಸುವ ಅಧಿಕಾರ ಜಿಲ್ಹಾ ಮ್ಯಾಜಿಸ್ಟ್ರೇಟರಿಗಿದೆ. ಜಾತೀಯ ದ್ವೇಷವನ್ನು ಪ್ರಚೋದಿಸುವವರ ಮೇಲೆ ಕ್ರಮ ತೆಗೆದುಕೊಳ್ಳಲಾಗುವದು. ಎಲ್ಲ ಪಕ್ಷಗಳ ಧುರೀಣರೂ ತಮ್ಮ ಅನುಯಾಯಿಗಳಿಗೆ ಸಂಯಮದಿಂದ ವರ್ತಿಸಲು ಹೇಳುವರೆಂದು ನಂಬಿದ್ದೇನೆಂದು ಮುಂತಾಗಿ ಈ ಪ್ರಕಟನೆಯಲ್ಲಿ ಹೇಳಿದ್ದಾರೆ.

ಮುಸ್ಲಿಂಲೀಗ ಅಧ್ಯಕ್ಷ ಮಮದೋತ ನವಾಬರು ಈ ಒಡಂಬಡಿಕೆಯನ್ನು ಲಕ್ಷಿಸಿ ಪ್ರಕಟನೆಯೊಂದನ್ನು ಹೊರಡಿಸಿ ಕಾಯದೇ ಭಂಗ ಚಳವಳಿಯನ್ನು ನಿಲ್ಲಿಸಲಾಗಿದೆಂದು ಸಾರಿದ್ದಾರೆ.

# ಕರ್ನಾಟಕದಲ್ಲಿ ರಾಷ್ಟ್ರಾಧ್ಯಕ್ಷರ ಸಂಚಾರ

ರಾಷ್ಟ್ರಾಧ್ಯಕ್ಷರಾದ ಆಚಾರ್ಯ ಕೃಪಲಾನಿಯವರು ಮಾರ್ಚ ೧೯ ನೇ ತಾರೀಕಿನಿಂದ ಕರ್ನಾಟಕದಲ್ಲಿಯ ತಮ್ಮ ಪ್ರವಾಸವನ್ನು ಪ್ರಾರಂಭಿಸುವರು. ಅವರು ಮಾರ್ಚ ೧೯ ಕ್ಕೆ ಕಾಲಿಕತ್ತಿನಿಂದ ಮಂಗಳೂರಿಗೆ ಬರುವರು. ಅಲ್ಲಿಂದ ಅವರ ಕರ್ನಾಟಕ ಸಂಚಾರ ಪ್ರಾರಂಭವಾಗಿ ಕೊಡಗು ಮೈಸೂರು ಬೆಂಗಳೂರು ಹಾಸನ ಶಿವಮೊಗ್ಗ ಗೆರಸೊಪ್ಪೆ, ಕಾರವಾರ ಧಾರವಾಡ ಬಳ್ಳಾರಿ ವಿಜಾಪುರ ಗೋವಾ ಬೆಳಗಾವಿಗಳನ್ನು ಸಂದರ್ಶಿಸಿ ಎಪ್ರಿಲ ೫ ನೇ ತಾರೀಕೆಗೆ ಮುಂಬಯಿಗೆ ಹೋಗುವರು, ಅವರ ಆರೋಗ್ಯ ಸರಿಯಿರದ್ದರಿಂದ ಅದಷ್ಟು ಹೆಚ್ಚು ಕಾರ್ಯಕ್ರಮಗಳನ್ನಿಟ್ಟುಕೊಳ್ಳಬಾರದೆಂದು ಪ್ರಾಂತದಲ್ಲೆಲ್ಲ ಅವರಿಗೆ ತಕ್ಕ ಮನ್ನಣೆಯಾಗುವಂತೆ ನೋಡಿಕೊಳ್ಳಬೇಕೆಂದು ಮುಂತಾಗಿ ಪ್ರಾಂತಾಧ್ಯಕ್ಷ ಶ್ರೀ ಎಸ್. ನಿಜಲಿಂಗಪ್ಪನವರು ಬಿನ್ನವಿಸಿಕೊಂಡಿದ್ದಾರೆ.

# ಹಿಂದುಸ್ಥಾನ

## ಮುಂಬಯಿ

ಠಾಣೆ ಕಲೆಕ್ಟರರ ಪರ್ಸನಲ್ ಅಸಿಸ್ಟಂಟ ಹಾಗು ಜಿಲ್ಹೆಯ ಡೆಪ್ಯುಟಿ ಕಲೆಕ್ಟರರಾದ ಕಾಂತಿಲಾಲ ಹರಿಲಾಲ ವೋರಾ ಎಂಬವರ ಮೇಲಿನ ಲಂಚದ ಆರೋಪದ ಖಟ್ಲೆ ತೀರ್ಪು ಆಗಿ ಅವರಿಗೆ ೩ ತಿಂಗಳ ಸಶ್ರಮ ಶಿಕ್ಷೆ ಮತ್ತು ೨೫೦ ರೂ. ದಂಡ ಕೊಡದಿದ್ದರೆ ಮತ್ತೆ ೧॥ ತಿಂಗಳ ಶಿಕ್ಷೆ ವಿಧಿಸಲ್ಪಟ್ಟಿತು. ಸುಖಸಂಗಭಯ್ಯಾ ಎಂಬವನ ಕಡೆಯಿಂದ ೧೦೦ ರೂ. ಲಂಚ ಸ್ವೀಕರಿಸುವ ಸಮ್ಮತಿ ಕೊಟ್ಟದ್ದಕ್ಕಾಗಿ ಈ ಶಿಕ್ಷೆಯಾಯಿತು. ಅಲ್ಲದೆ ಮೋತೀರಾಮ ನಾಖಲಾ ಎಂಬವನ ಕಡೆಯಿಂದ ೫೦ ರೂ. ಲಂಚ ತಿಂದದ್ದಕ್ಕೆ ಅವರಿಗೆ ೬ ತಿಂಗಳ ಸಶ್ರಮ ಶಿಕ್ಷೆ ೫೦೦ ದಂಡ ಕೊಡದಿದ್ದರೆ ಮತ್ತೆ ೩ ತಿಂಗಳ ಸಶ್ರಮ ಶಿಕ್ಷೆಯಾಯಿತು. ಇದಲ್ಲದೆ ಲಂಚ ತೆಗೆದುಕೊಳ್ಳಲು ಒಪ್ಪಿದ್ದಕ್ಕಾಗಿ ೩ ತಿಂಗಳ ಸಶ್ರಮ ಶಿಕ್ಷೆ ಮತ್ತು ೨೫೦ ರೂ. ದಂಡ ವಿಧಿಸಲಾಯಿತು.

ಮುಂಬಯಿ ಪ್ರಾಂತದ ಹೊಲದೊಡೆಯರ ಪರಿಷತ್ತು ಸಾತಾರೆಯ ಶ್ರೀ ಛತ್ರಪತಿ ಶಾಹೂ ಮಹಾರಾಜರ ಅಧ್ಯಕ್ಷತೆಯಲ್ಲಿ ಬೆಳಗಾವದಲ್ಲಿ ಎರಡು ದಿನ ನಡೆಯಿತು. ಹೊಲಸಾಗುವಳಿ ಕಾಯಿದೆ ರದ್ದು ಪಡಿಸಬೇಕು ಭೂಮಿಗಳನ್ನು ತುಂಡು ಮಾಡುವದನ್ನು ಪ್ರತಿಬಂಧಿಸುವ ಅವುಗಳನ್ನು ಕ್ರೋಢೀಕರಿಸುವ ಮಸೂದೆಯನ್ನು ಸಾರ್ವಜನಿಕ ಅಭಿಪ್ರಾಯಕ್ಕಾಗಿ ಕಳಿಸಬೇಕೆಂದು ಕೇಳಿಕೊಳ್ಳಲಾಯಿತು. ಸದ್ಯದ ಶಾಸನ ಸಭೆ ಸದಸ್ಯರು ಕೇವಲ ಸ್ವಾತಂತ್ರ್ಯದ ಮುದ್ದೆಯ ಮೇಲೆ ಆರಿಸಲ್ಪಟ್ಟವರಿರುವದರಿಂದ ಹೊಸ ಚುನಾವಣೆವರೆಗೆ ಈ ಕಾಯಿದೆ ತಡೆಹಿಡಿಯಬೇಕೆಂದು ಮುಂತಾಗಿ ಗೊತ್ತುವಳಿಗಳಾದವು—

ಪ್ರಾಥಮಿಕ ಶಿಕ್ಷಕರಿಗೆ ತಾತ್ಪೂರ್ತಿಕ ಪರಿಹಾರದ ಭಿಕ್ಷೆ ಬೇಡಿ ಒಬ್ಬ ಸಾದಾ ಪೋಲೀಸನಂತೆ ಜೀವನ ಸಾಗಿಸಲು ಅನುಕೂಲವಾಗುವಷ್ಟು ಮೂಲವೇತನದಲ್ಲಿ ಹೆಚ್ಚಳ ಬೇಕು ಎಂದು ಪ್ರಾಂತಿಕ ಪ್ರಾಥಮಿಕ ಶಿಕ್ಷಕರ ಸಂಘದ ಅಧ್ಯಕ್ಷ ದೊಂದೆಯವರು ಹೇಳಿದರು. ಶಿಕ್ಷಕರಿಗೆ ಅತ್ಯಲ್ಪವೇತನದ ಕೊಡಲಾಗದ ಸರಕಾರ ಅಧಿಕಾರ ತ್ಯಾಗ ಮಾಡಬೇಕೆಂದೂ ಹೇಳಿದರು.

ಪಟ್ಟಣದಲ್ಲಿ ಬಸ್ ಸರ್ವಿಸ್ ನಡೆಸುವದು ಪೌರಸಭೆಯ ಅಧಿಕಾರ ಕ್ಷೇತ್ರದಲ್ಲಿ ಬರುವದಿಲ್ಲ ಮತ್ತು ಈ ಬಗ್ಗೆ ವೆಚ್ಚವಾಗಿದ್ದರೆ ಅದಕ್ಕೆ ವೈಯುಕ್ತಿಕವಾಗಿ ಸದಸ್ಯರೆ ಹೊಣೆಗಾರರೆಂದು ಅಹಮದಾಬಾದ ಪೌರಸಭೆಯ ಬಸ್‌ಸರ್ವಿಸ್ ಪ್ರಕರಣದಲ್ಲಿ ಅಹಮದಾಬಾದ ಜಾಯಿಂಟ ಸಿವಿಲ್ ನ್ಯಾಯಾಧೀಶರು ನಿರ್ಣಯ ಕೊಟ್ಟರು.

ಪುಣೆ ಕರ್ನಾಟಕ ಸಮಾಜಸಂಘದ ಆಶ್ರಯದಲ್ಲಿ ೧೪ ನೇ ತಾರೀಕು ಲಿಮಯೆ ನಾಟ್ಯಚಿತ್ರ ಮಂದಿರದಲ್ಲಿ ಪುಣೆ ನಾಟ್ಯವಿಲಾಸಿಗಳು ಪ್ರೊ. ಆರ್. ವಿ. ಜಾಗಿರದಾರರ ಯಮನಸೋಲು ಪ್ರಹಸನವನ್ನು ಧಾರವಾಡದ ನಾಟ್ಯವಿಲಾಸಿಗಳು ಪ್ರಾರಂಭದ ಚಿತ್ರವನ್ನು ಆಡಿತೋರಿಸಿದರು. ಸಂಘದ ವತಿಯಿಂದ ಧಾರವಾಡದ ವಿಲಾಸಿಗಳಿಗೆ ಬಹುಮಾನ ಕೊಡಲಾಯಿತು.

ನಾವಿಕರಬಂಡಾಯ ದಿನಾಚರಣೆ ೨೩ ನೇ ತಾ ಸಾದಾರೀತಿ ಮುಂಬಯಿಯಲ್ಲಿ ಸಾಂಗವಾಯಿತು ಸಭೆ ಮೆರವಣಿಗೆಗಳನ್ನು ಸರಕಾರದವರು ಪ್ರತಿಬಂಧಿಸಿದ್ದರಿಂದ ಆ ಕಾರ್ಯಕ್ರಮ ಜರುಗಲಿಲ್ಲ. ಚೌಪಾಟಿಯಲ್ಲಿ ಸಭೆ ಜರುಗಿಸಲು ಪ್ರಯತ್ನಿಸುವಾಗ ಪುರೋಗಾಮಿ ಪಕ್ಷದ ಶ್ರೀ ಶೀಲಭದ್ರ ಯಾಜಿ ಮೊದಲಾದ ೧೬ ಜನರು ಸೆರೆಹಿಡಿಯಲ್ಪಟ್ಟರು. ಸೌಮ್ಯ ಲಾಠಿಪ್ರಹಾರವೂ ಆಯಿತು. ಧ್ವಜ ಸಹಿತ ಒಬ್ಬ ಹುಡುಗನನ್ನು ಹಿಡಿದುಕೊಂಡು ಹೋಗಲಾಯಿತು.

ಕಳ್ಳಪೇಟೆ ಮತ್ತು ಲಾಭಬಡಕತನ ನಿರ್ಮೂಲನೆಯಲ್ಲಿ ಸಹಕರಿಸದಿದ್ದರೆ ಸರಕಾರ ಉಗ್ರೋಪಾಯ ಕೈಕೊಳ್ಳುವದಾಗಿ ಮಂತ್ರಿಗಳಾದ ಶ್ರೀ ದಿನಕರರಾವ ದೇಸಾಯರು ಮುಂಬಯಿ ಜವಳಿ ಚಿಲ್ಲರ ವ್ಯಾಪಾರವನ್ನು ಸಭೆಯಲ್ಲಿ ಹೇಳಿದರು.

ಅ. ಭಾ. ಉದ್ದಿಮೆದಾರ ಸಂಘದ ಈ ವರ್ಷದ ಅಧ್ಯಕ್ಷರೆಂದು ಸರ್ ಎಂ. ವಿಶ್ವೇಶ್ವರಯ್ಯನವರನ್ನು ಆರಿಸಲಾಗಿದೆ. ಮುಂಬಯಿಯಲ್ಲಿ ಎಪ್ರಿಲ ೧೨ ೧೩ ಕ್ಕೆ ನೆರೆಯಲಿರುವ ಅ. ಭಾ. ಉದ್ದಿಮೆದಾರ ಸಂಘದ ೧೬ ನೆ ವಾರ್ಷಿಕ ಪರಿಷತ್ತಿನ ಅಧ್ಯಕ್ಷತೆಯನ್ನು ಇವರೇ ವಹಿಸುವರು.

## ಮದ್ರಾಸ

ಕಳೆದ ೧೨ ದಿನಗಳಿಂದ ಸಂಪಿನ ಮೂಲಕ ಮುಚ್ಚಲ್ಪಟ್ಟಿದ್ದ ಕೊಯಿಮುತ್ತೂರಿನ ಜವಳಿ ಗಿರಣಿಗಳೆಲ್ಲ ೨೪ರಿಂದ ಮತ್ತೆ ನಡೆಯಹತ್ತಿವೆ.

ತ್ರಿಪ್ಲಿಕೇನದಲ್ಲಿ ಉಡುಪಿಯ ಶ್ರೀ. ಕೃಷ್ಣಮಂದಿರದಲ್ಲಿ ಶ್ರೀ ವಾದಿರಾಜ ಸ್ವಾಮಿಗಳ ಆರಾಧನೆ ಮಾರ್ಚ ೩ ರಿಂದ ೧೧ರ ವರೆಗೆ ನಡೆಯುವದು. ತಾ ೭-೯ ರ ವರೆಗೆ ವಿದ್ವತ್ಸಭೆ ಜರಗುವದು. ಕನ್ನಡ, ತಮಿಳು ಹಾಗು ಇಂಗ್ಲಿಷಿನಲ್ಲಿ ಉಪನ್ಯಾಸಗಳಾಗುವವು.

ಪಾಂಡಿಚೇರಿಯಲ್ಲಿ ೨೭ನೇ ತಾರೀಕು ನಾವಿಕರ ಬಂಡಾಯ ದಿನಾಚರಣೆಯಲ್ಲಿ ದಂಗೆಯಾಗಿ ಒಬ್ಬನು ಸತ್ತಿದ್ದು ೧೦ ಜನರಿಗೆ ಗಾಯಗಳಾಗಿವೆ ಊರಲ್ಲಿ ಎಲ್ಲರೂ ಹರತಾಳ ಮಾಡಿದ್ದರು. ಆದರೆ ಅನಸಾರೀಕಫೆಯೊಂದು ತೆರೆದಿದ್ದರಿಂದ ಇಲ್ಲಿ ಚಳವಳಿಗಾರರು ಗೊಂದಲ ಹಾಕಿದರು. ಪೋಲೀಸರು ಗುಂಡುಹಾರಿಸಿದ್ದರಿಂದ ರಾಜಗೋಪಾಳನೆಂಬ ಕೂಲಿಕಾರನೊಬ್ಬ ಸತ್ತದ್ದು ಗೊತ್ತಾಯಿತು. ಮುಖ್ಯ ಕಾರ್ಯದರ್ಶಿಗಳು ಅವನ ಗುಂಡಿನಿಂದ ಸತ್ತಿದ್ದು ಸುಳ್ಳೆಂದು ಪ್ರಕಟಿಸಿದ್ದಾರೆ.

ಮದ್ರಾಸದಲ್ಲಿ ಚೂಳಾಯದಲ್ಲಿರುವ ಶ್ರೀ. ಆಂಜನೆಯಸ್ವಾಮಿ ದೇವಾಲಯದಲ್ಲಿ ಹರಿಜನರ ಪ್ರವೇಶವಾಯಿತು. ಅನೇಕ ಸವರ್ಣ ಹಿಂದುಗಳೂ ಇವರನ್ನು ಕೂಡಿಕೊಂಡಿದ್ದರು. ದೇವಾಲಯದ ಅಧಿಕಾರಿಗಳು ಎಲ್ಲರನ್ನು ಸ್ವಾಗತಿಸಿ ದೇವಾಲಯಗಳನ್ನೆಲ್ಲ ಪ್ರವೇಶಿಸಿದರು.

## ಸಿಂಧ

ಸಿಂಧ ವಿಶ್ವವಿದ್ಯಾಲಯ ಜಾತೀಯ ಪ್ರಾತಿನಿಧ್ಯದ ಕಲಮನ್ನು ಕಾಂಗ್ರೆಸ ಪಕ್ಷವು ಶಾಸನ ಸಭೆಯಲ್ಲಿ ಬಲವಾಗಿ ವಿರೋಧಿಸಿತು. ಕಾಂಗ್ರೆಸ್ಸಿನ ೧೫ ತಿದ್ದುಪಡಿಗಳೆಲ್ಲ ನಿರಾಕೃತವಾದವು ಮುಖ್ಯ ಮಂತ್ರಿಗಳು ಈ ಚರ್ಚೆಯ ಕಾಲಕ್ಕೆ ತಾವು ನಡುವೆ ಬಾಯಿಹಾಕಿ ಮುಸಲ್ಮಾನರು ಬಹುಸಂಖ್ಯಾಕರಿರುವರು. ಎಲ್ಲೆಡೆಗೆ ಅವರ ಜನಸಂಖ್ಯೆಯ ಪ್ರಮಾಣದ ಪ್ರಾತಿನಿಧ್ಯ ಸಿಕ್ಕಲೇಬೇಕು. ಈ ಪಾಠವನ್ನು ನಮಗೆ ಹಿಂದುಗಳು ಹಾಗು ಕಾಂಗ್ರೆಸ್ಸಿಗರು ಕಲಿಸಿಕೊಟ್ಟಿದ್ದಾರೆ ಎಂದು ತಿಳಿಸಿದರು.

ಅಲ್ಪಸಂಖ್ಯಾಕರನ್ನು ಅವರು ಯಾವದೇ ಪಂಗಡಕ್ಕೆ ಸೇರಿದವರಿರಲಿ ನ್ಯಾಯವಾದ ರೀತಿಯಲ್ಲಿ ನಡಿಸಿಕೊಳ್ಳಲಾಗುವದು. ಅವರಲ್ಲಿ ಸುರಕ್ಷಿತತೆಯ ಮತ್ತು ಭದ್ರತೆಯ ಹೊಣೆಯನ್ನು ಹೊರಲು ಬಹುಸಂಖ್ಯಾಕ ಪಕ್ಷ ಪ್ರಯತ್ನಿಸುವದು ಎಂದು ಮುಂತಾಗಿ ಬ್ಯಾ. ಜಿನ್ನಾರವರು ಮುಸ್ಲಿಂ ಲೀಗ ಧೋರಣೆಯನ್ನು ವಿವರಿಸಿರುವರು.

## ಬಿಹಾರ

ಬಿಹಾರದ ಪುನರ್ರಚನಾ ಶಾಖೆಯ ಮಂತ್ರಿಗಳು ಡಾ. ಸಯ್ಯದ ಮಹಮ್ಮದರಿಗೆ ವೈಯಕ್ತಿಕ ಕೊಡುಗೆಯೆಂದು ಪಂಡಿತ ಜವಾಹರಲಾಲರು ೫ ಸಾವಿರ ರೂಪಾಯಿಗಳನ್ನು ಕಳಿಸಿದ್ದಾರೆ. ಬಿಹಾರ ಗಲಭೆಯ ನಿರಾಶ್ರಿತರ ಪರಿಹಾರ ಕಾರ್ಯಕ್ಕಾಗಿ ಇದರ ವಿನಿಯೋಗ ಮಾಡಬೇಕೆಂದು ಕೇಳಿಕೊಳ್ಳಲಾಗಿದೆ.

ಛತ್ರದ ಎತ್ತುವಳಿ ಹುಕುಮನ್ನು ಅನ್ಯಾಯದಿಂದ ಅನ್ವಯಿಸಿದ ಬಗ್ಗೆ ಆಹಾರಮಂತ್ರಿ ಅನುಗ್ರಹನಾರಾಯಣಸಿಂಹರ ನಿವಾಸದೆದುರಿನಲ್ಲಿ ನವಬತಪುರದ ಕೆಲವರು ಎರಡೆರಡು ಗುಂಪಿನಿಂದ ಅನ್ನತ್ಯಾಗ ಪ್ರಾರಂಭಿಸಿದ್ದು ೪ ಜನರನ್ನು ಬಂಧಿಸಲಾಗಿದೆ.

## ಬಂಗಾಲ

ಪ್ರಾಂತದಲ್ಲಿನ ಗಂಭೀರ ಸ್ವರೂಪದ ಅರಾಜಕತೆಯ ಸಂಬಂಧದಲ್ಲಿ ಒಂದು ಹೇಳಿಕೆಯನ್ನು ಕೊಡುವೆವೆಂದು ಮುಖ್ಯ ಮಂತ್ರಿ ಸುರಾವರ್ದಿಯವರು ಶಾಸನ ಸಭೆಯಲ್ಲಿ ಹೇಳಿದರು. ಬಾಲುರಘಾಟದ ಗೋಳೀಬಾರನ್ನು ಚರ್ಚಿಸುವದರ ಸಲುವಾಗಿ ಕಾಂಗ್ರೆಸ ಪಕ್ಷದವರು ಮಂಡಿಸಿದ ನಿಲುವಳಿ ಸೂಚನೆಗೆ ಉತ್ತರ ರೂಪವಾಗಿ ಮುಖ್ಯ ಮಂತ್ರಿಗಳು ಹೀಗೆ ಸಾರಿದರು.

ಬಂಗಾಲ ಗವರ್ನರರು ಕಳೆದ ಸಪ್ಟಂಬರದಲ್ಲಿ ಹೊರಡಿಸಿದ ಹತ್ತು ಆರ್ಡಿನನ್ಸಗಳಿಗೆ ತಾತ್ಪೂರ್ತಿಕ ಕಾಯದೆ ಸ್ವರೂಪ ಕೊಡುವ ಮಸೂದೆ ಪಾಸಾಯಿತು. ಈ ಆರ್ಡಿನನ್ಸಗಳನ್ನು ಯಾವ ಪಕ್ಷಪಾತವಿಲ್ಲದೆ ಉಪಯೋಗಿಸಲಾಗುವದೆಂದು ಮುಖ್ಯ ಮಂತ್ರಿಗಳು ಆಶ್ವಾಸನ ಕೊಟ್ಟರು.

ಫೆಬ್ರುವರಿ ೨೦ ಕ್ಕೆ ಖಾನಪೂರದಲ್ಲಿ ತಿಭಾಗ ಚಳವಳಿ ಸಂಬಂಧದಲ್ಲಿ ಸಶಸ್ತ್ರ ಪೋಲೀಸರಿಗೂ ಕಮ್ಯುನಿಸ್ಟರಿಗೂ ನಡೆದ ತಿಕ್ಕಾಟದಲ್ಲಿ ೨೦ ಜನ ಸತ್ತಿರುವರು. ಅನೇಕರಿಗೆ ಗಾಯಗಳಾಗಿದ್ದು ಅವರ ಉಪಚಾರ ನಡೆದಿದೆ ಸೈದಪೂರ ಮೊದಲಾದ ಹಳ್ಳಿಗಳಲ್ಲಿಯೂ ಲೂಟಿ ನಡೆದ ಸುದ್ದಿ ಬಂದಿದೆ.

ಎರಡು ದೇವಾಲಯಗಳ ನಾಶ ಎಂಬ ಸುದ್ದಿ ಪ್ರಸಿದ್ಧಿಸಿದ್ದಕ್ಕೆ ಕಲಕತ್ತೆಯ ಆನಂದ ಬಜಾರ ಪತ್ರಿಕೆಯ ಪ್ರಕಾಶಕರ ಮೇಲೆ ಖಟ್ಲೆ ನಡೆದು ಚಾರ್ಜ ಇಡಲಾಯಿತು.

ಕಲಕತ್ತೆಯ ಅಮೃತ ಬಜಾರ ಮತ್ತು ಹಿಂದುಸ್ತಾನ ಸ್ಟಾಂಡರ್ಡ ಪತ್ರಿಕೆಗಳ ಕಚೇರಿಗಳನ್ನು ಪೋಲೀಸರು ಝಡತಿ ಮಾಡಿ ಕಲಕತ್ತಾ ಟ್ರಾಂ ಕೆಲಸಗಾರರ ಸಂಪಿಗೆ ಸಂಬಂಧಿಸಿದ ಕೆಲ ಕಾಗದ ಪತ್ರಗಳನ್ನೊಯ್ದರು.

## ಮಧ್ಯಪ್ರಾಂತ

ವರ್ಹಾಡ ಪ್ರಾಂತಿಕ ಪ್ರಾಥಮಿಕ ಶಿಕ್ಷಕ ಸಂಘದ ನಿರ್ಣಯಾನುಸಾರ ಅಮರಾವತಿ ಯವತಮಾಳ ವರ್ಧಾ ಮೊದಲಾದ ಭಾಗಗಳ ಪ್ರಾಥಮಿಕ ಶಿಕ್ಷಕರು ೨೪ರಿಂದ ಸಂಪು ಪ್ರಾರಂಭಿಸಿರುವರು

ಮಧ್ಯಪ್ರಾಂತ ಬಿಹಾರ ಮತ್ತು ಬಂಗಾಲ ಪ್ರಾಂತಗಳಲ್ಲಿದ್ದ ಉತ್ಕಲದ ಭಾಗಗಳನ್ನು ಪುನಃ ಉತ್ಕಲ ಪ್ರಾಂತಕ್ಕೆ ಸೇರಿಸಲು ಪ್ರಯತ್ನಿಸಬೇಕೆಂಬ ಗೊತ್ತುವಳಿ ಉತ್ಕಲ ಶಾಸನ ಸಭೆಯಲ್ಲಿ ಸ್ವೀಕೃತವಾಯಿತು.

## ಸರಹದ್ದು

ಮಾಲಾಕಂಡದಲ್ಲಿ ಇತ್ತೀಚಿಗೆ ನಡೆದ ಗಲಭೆಯಲ್ಲಿ ಮರಣ ಹೊಂದಿದ ಓರ್ವ ಶೀಖನ ಹೆಂಡತಿ ಪ್ರಾಸ್ತಿ ಎಂಬವಳನ್ನು ಮುಸಲ್ಮಾನರು ಗುಪ್ತರೀತಿಯಿಂದ ಅಬೋಟಾಬಾದಕ್ಕೆ ಒಯ್ದು ಮುಸಲ್ಮಾನನೊಬ್ಬನಿಗೆ ಲಗ್ನ ಮಾಡಿ ಕೊಟ್ಟರು. ಒತ್ತಾಯದ ಧರ್ಮಾಂತರ ಮತ್ತು ಮದುವೆಯಿಂದ ಅವಳನ್ನು ಕಮೀಶನರರು ಬಿಡಿಸಿದ್ದಕ್ಕಾಗಿ ಲೀಗ ಧುರೀಣರು ಮತಪ್ರದರ್ಶನ ನಡೆಸಿರುವರು. ಮ್ಯಾಜಿಸ್ಟ್ರೇಟರ ಹುಕುಮ ಮುರಿದು ಲೀಗ ಧುರೀಣ ಅಬ್ದುಲ್ ಕಯೂಮ ಖಾನ ಮೊದಲಾದವರು ಸೆರೆಯಾಳಾಗಿರುವರು.

ಲೀಗಿನವರು ಸರಹದ್ದು ಪ್ರಾಂತದಲ್ಲಿ ಗುಪ್ತರೀತಿಯಿಂದ ಚಳವಳಿಯನ್ನು ಸಂಘಟಿಸಹತ್ತಿದ್ದು ಅವರ ಕೆಲವು ಹಸ್ತಪತ್ರಗಳು ಸಿಕ್ಕಿರುವವು. ತಖಬಾಯಿ ಸ್ಟೇಶನ ಬಳಿಯಲ್ಲಿ ಉಗಿಬಂಡೆ ಉರುಳಿಸುವ ಪ್ರಯತ್ನ ನಡೆದ ಸುದ್ದಿ ಬಂದಿದೆ. ಈ ಚಳವಳಿಯ ಸಂಬಂಧದಲ್ಲಿ ಪೇಶಾವರ ಹಾಗು ಮರ್ದಾನ ಜಿಲ್ಹೆಗಳಲ್ಲಿ ಪ್ರಮುಖ ಧುರೀಣರು ಮತ್ತು ಕಾರ್ಯಕರ್ತರು ಬಂಧಿಸಲ್ಪಟ್ಟಿರುವರು. ಚಾರಸಾದ ತಹಶೀಲದಲ್ಲಿ ೧೬ ಜಮೀನದಾರರ ಬಂಧನವಾಗಿದೆ. ಹಾಗಿಯು ಪೀರ ಅಲಮಖಾನರೂ ಅವರಲ್ಲಿರುವರು. ಲೀಗಿನವರ ಚಳವಳಿಯ ಮೂಲಕ ಪೇಶಾವರದಲ್ಲಿ ೧೪೪ ನೇ ಕಲಮು ಹೊರಡಿಸಿ ಸಭೆ ಮೆರವಣಿಗೆಗಳನ್ನು ಪ್ರತಿಬಂಧಿಸಲಾಗಿದೆ. ಮುಖ್ಯ ಮಂತ್ರಿಗಳ ಮನೆಯ ಸುತ್ತಲೂ ಸೈನಿಕರನ್ನು ಕಾವಲಿಡಲಾಗಿದೆ.

ಪೇಶಾವರದಲ್ಲಿ ಲೀಗಿನ ಮತಪ್ರದರ್ಶಕರು ಸೆಂಟ್ರಲ್ ಜೇಲಿನ ಮುಳ್ಳು ಬೇಲಿಯನ್ನು ಲೆಕ್ಕಿಸದೆ ಒಳನುಗ್ಗಿ ಕಿಡಕಿಯ ಗಾಜುಗಳನ್ನು ಒಡೆದು ಗೊಂದಲ ಹಾಕಿದ್ದರಿಂದ ಮುಖ್ಯ ಮಂತ್ರಿ ಡಾ. ಖಾನಸಾಹೇಬರ ಕಟಾಂಜನದಲ್ಲಿ ಬಂದು 'ನನಗೇನೂ ಅಧಿಕಾರ ಬೇಕಾಗಿಲ್ಲ. ಪಠಾಣರು ಆರಿಸಿ ತಂದು ಅಧಿಕಾರಕ್ಕೆ ಒಪ್ಪಿಸಿದ್ದಾರೆ. ಅವರಿಗೆ ಬೇಡವಾದರೆ ನಾ ಈಗಲೆ ರಾಜೀನಾಮೆಯನ್ನು ಕೊಡುವೆ ಬರಿ ಹೆದರಿಕೆಯಿಂದ ಯಾವ ಪ್ರಯೋಜನವಿಲ್ಲೆಂದು ಮುಂತಾಗಿ ಹೇಳಿದರು. ಲೀಗಿನವರು ಅಲ್ಲಿದ್ದ ಧ್ವಜಸ್ತಂಭವನ್ನು ಮುರಿದು ಕಾಂಗ್ರೆಸ್ ಧ್ವಜವನ್ನು ಸುಟ್ಟು ಹಾಕಿದರೆಂದು ತಿಳಿಯುತ್ತದೆ.

ಪಂಡಿತ ಜವಾಹರಲಾಲರ ಗಡಿನಾಡ ಸಂಚಾರದ ಕಾಲದ ಎಲ್ಲ ಪುಂಡಾಟಿಕೆಯ ಬುಡದಲ್ಲಿ ಮಾಲಕಂದದ ಪೊಲಿಟಿಕಲ್ ಎಜಂಟರಾದ ಮಹಬ್ಬೂಬ ಅಲ್ಲಿಯವರೆ ಇದ್ದಾರೆ. ಮುಸ್ಲಿಂ ಲೀಗಿನ ಮೇಲೆ ಎಲ್ಲ ದೋಷ ಹೊರಿಸಿ ಪಾರಾಗಬೇಕೆಂದು ಇವರು ಯತ್ನಿಸಿದರು. ಆದರೆ ಇದರಿಂದ ಪಠಾಣರ ಅತಿಥಿ ಸತ್ಕಾರದ ಪರಂಪರೆಗೆ ತಾವು ಲೋಪ ತರುತಿದ್ದುದು ಅವರಿಗೆ ಹೊಳೆಯಲಿಲ್ಲ. ಅಂತೆಯೆ ಅವರ ಯತ್ನ ಸಫಲವಾಗಲಿಲ್ಲೆಂದು ಮುಂತಾಗಿ ಕೇಂದ್ರ ಶಾಸನ ಸಭೆಯ ಸರಹದ್ದ ಸದಸ್ಯರಾದ ಖಾನ ಅಬ್ದುಲ್ ಗಣಿಖಾನರು ಹೇಳಿದರು.

# ಕರ್ನಾಟಕ

## ಧಾರವಾಡ

ತಮಗೆ ಸಕ್ಕರೆ ಮತ್ತು ಸೀಮಾ ಸಾಮಾನುಗಳು ಸಾಕಷ್ಟು ಪ್ರಮಾಣದಲ್ಲಿ ಸಿಕ್ಕುವದಿಲ್ಲ. ಇದರಿಂದ ಅಂಗಡಿಗಳನ್ನು ಮುಚ್ಚಬೇಕಾಗುವದು ಎಂದು ಮುಂಚಾಗಿ ಮೊದಲೇ ನೋಟೀಸ ಕೊಟ್ಟ ಪ್ರಕಾರ ಧಾರವಾಡ ಹಾಟೆಲ ಒಡೆಯರ ಸಂಘದ ಚಹಾದಂಗಡಿಗಳು ೨೫ ನೇ ತಾರೀಕಿನಿಂದ ಮುಚ್ಚಿವೆ. ಸಂಘದಲ್ಲಿ ಸೇರದಿದ್ದ ಕೆಲ ಅಂಗಡಿಗಳು ಮಾತ್ರ ತೆರದಿವೆ.

ಗದಗ ಬೆಟಗೇರಿ ಸುತ್ತಲಿನ ಹಳ್ಳಿಗಳಾದ ನರಸಾಪುರ ನಾಗಸಮುದ್ರ ಚಿಕ್ಕೊಪ್ಪ ಕಣಗಿನಹಳ್ಳಿ ಮೊದಲಾದ ಗ್ರಾಮಗಳಲ್ಲಿಯ ಹೊಲದೊಳಗಿನ ಬೆಳೆಗಳನ್ನು ಗದಗ ಸೆಟ್ಲಮೆಂಟಿನ ಹರಣಶಿಕಾರಿ ಜನರು ರೈತರನ್ನು ಅಂಜಿಸಿ ಹಾಡೇಹಗಲು ಅಪಹರಿಸಿಕೊಂಡು ಹೋಗಹತ್ತಿದ್ದಾರೆ. ಚಿಕ್ಕೊಪ್ಪ ರೈತರು ೪ ೬ ಜನ ಹರಣಶಿಕಾರಿಗಳನ್ನು ಹಿಡಿದು ಪೋಲೀಸರ ಕಡೆಗೆ ಒಪ್ಪಿಸಿದ್ದಾರೆ.

ಲಂಚ ನಿರ್ಮೂಲನ ಶಾಖೆಯ ಇನಸ್ಪೆಕ್ಟರ ಶ್ರೀ ಭಟ್ಟರು ಇತರ ಅಧಿಕಾರಿಗಳೊಡನೆ ಸರಕಾರಿ ಗುದಾಮು ಅಧಿಕಾರಿಗಳೊಡನೆ ಶ್ರೀ ಆರ್. ಪಿ. ವಿನೀತ ಹಾಗು ಅವರ ಸೀನಿಯರ ಕಾರಕೂನ ಶ್ರೀ ಫಕೀರಪ್ಪ ಕಾಬಸದ ಅವರ ಮನೆಗಳನ್ನು ತಪಾಸವಾಡಲಾಗಿ ಅವಶ್ಯಕತೆಗಿಂತ ಹೆಚ್ಚು ಅಕ್ಕಿ ಗೋದಿ ಜೋಳ ಹಾಗು ಸಕ್ಕರೆ ಸಿಕ್ಕಿದ್ದಕ್ಕಾಗಿ ಅವನ್ನೆಲ್ಲ ಜಪ್ತಮಾಡಿ ಅವರನ್ನು ಹಿಡಿದು ಜಾಮೀನಿನ ಮೇಲೆ ಬಿಟ್ಟಿರುವರು. ಗುದಾಮುಹತ್ತರ ಒಂದು ಸಕ್ಕರೆ ಚೀಲವನ್ನು ೧೫ ರೂಗೆ ಮಾರಿದ್ದಕ್ಕಾಗಿ ಗುದಾಮು ಕಾರಕೂನ ಶ್ರೀ ವಿರುಪಾಕ್ಷಯ್ಯ ಪೂಜಾರಿ ಇವರನ್ನು ಬಂಧಿಸಿ ಜಾಮೀನ ಮೇಲೆ ಬಿಟ್ಟಿರುವರು.

ಮುಂಬಯಿ ಸರಕಾರದ ಒಕ್ಕಲತನ ಮತ್ತು ಅರಣ್ಯ ಮಂತ್ರಿಗಳಾದ ಮಾನ್ಯ ಎಂ. ಪಿ. ಪಾಟೀಲರು ರಾಣೇಬಿನ್ನೂರ ಮೊದಲಾದ ಕಡೆಯಲ್ಲಿಯ ಕಾರ್ಯಕ್ರಮ ತೀರಿಸಿಕೊಂಡು ಧಾರವಾಡಕ್ಕೆ ಬಂದು ಒಕ್ಕಲತನ ಕಾಲೇಜಿನ ಸಂಬಂಧದಲ್ಲಿ ವಿಚಾರವಿನಿಮಯ ಮಾಡಿಕೊಂಡು ಹೋದರು.

ಹುಬ್ಬಳ್ಳಿಯಲ್ಲಿ ಆಹಾರ ಪೂರಯಿಕೆ ಇನಸ್ಪೆಕ್ಟರ ಶ್ರೀ ರಾಯಚೂರ ಮತ್ತು ಸಿಟಿ ಸಬ್ ಇನಸ್ಪೆಕ್ಟರ ಶ್ರೀ ಎಸ್. ಎ. ಕುಲಕರ್ಣಿಯವರು ಪೋಲೀಸ ಪಡೆ ಯೊಡನೆ ೨೨ ನೇ ತಾರೀಕು ಕಳ್ಳಪೇಟೆಯ ಬೇಟೆಯಾಡುವ ನಿಮಿತ್ತ ಸುಮಾರು ೨೫ ಅಂಗಡಿ ಮತ್ತು ಗುದಾಮುಗಳ ಝಡತಿ ಮಾಡಿದರು. ಝಡತಿಯ ಕಾಲಕ್ಕೆ ೧೪೦೦ ಡಜನ್ ಕಡ್ಡಿಪೆಟ್ಟಿಗೆಗಳು ೩೫ ಚೀಲ ಜೋಳ ೧೨ ಚೀಲ ಹತ್ತಿಕಾಳು ಮೊದಲಾದ್ದು ಸಿಕ್ಕಿದ್ದು ಅವನ್ನೆಲ್ಲ ಜಪ್ತಮಾಡಿದರು.

ರಾಣೇಬಿನ್ನೂರಿನಲ್ಲಿ ಧಾರವಾಡ ಜಿಲ್ಲಾ ಒಕ್ಕಲತನ ಪ್ರದರ್ಶನ ಮತ್ತು ಸಹಕಾರ ಪರಿಷತ್ತುಗಳನ್ನು ಮಾನ್ಯ ಮಂತ್ರಿ ಪಾಟೀಲ ಮಲ್ಲನಗೌಡರು ಪ್ರಾರಂಭಿಸಿದರು. ಉಪಮಂತ್ರಿ ಶ್ರೀ ಪಾಟೀಲ ಕಲ್ಲನಗೌಡರು ಅಧ್ಯಕ್ಷತೆ ವಹಿಸಿದ್ದರು. ಒಕ್ಕಲಿಗರ ಉದ್ಧಾರವಾಗಬೇಕಾದರೆ ಅವರೇ ಟೊಂಕ ಕಟ್ಟಿ ಮುಂದೆಬರಬೇಕು. ಅಂಥವರಿಗೆ ಸರಕಾರ ಸಹಾಯ ಮಾಡುವದೆಂದು ಮುಂತಾಗಿ ಮಾನ್ಯ ಮಂತ್ರಿಗಳು ಹೇಳಿದರು. ಒಕ್ಕಲತನ ಭೂಮಿಯ ಒಡೆತನ ಮೊದಲಾದ ಭವಿತವ್ಯದ ಬಗ್ಗೆ ಅಧ್ಯಕ್ಷರು ಮನನೀಯ ವಿಚಾರಗಳನ್ನು ಹೇಳಿದರು.

ರಾಣೆಬಿನ್ನೂರಿನ ಆಹಾರ ಪೂರೈಕೆ ಶಾಖೆಯ ಸಬ್ ಇನಸ್ಪೆಕ್ಟರರು ಇದೇ ತಾಲೂಕಿನ ತುಮ್ಮಿನಕಟ್ಟಿಯಿಂದ ತುಂಗಭದ್ರಾ ಹೊಳೆಯನ್ನ ದಾಟ ೨೦೦೦ ರೂಪಾಯಿ ಬೆಲೆ ಬಾಳುವ ೧೭ ಅಂದಿಗೆ ಹತ್ತಿಯನ್ನು ಜಪ್ತಮಾಡಿಕೊಂಡು ತಂದಿರುವರು. ಈ ಮಾಲು ಯಾರದೆಂಬದು ಈ ವರೆಗೂ ತಿಳಿದಿಲ್ಲ.

---

ದಾವಣಗೆರೆಯ ನಗರದ ಪ್ರಾಥಮಿಕ ಮಾಧ್ಯಮಿಕ ಹಾಗು ಪ್ರೌಢ ಪಾಠಶಾಲೆಗಳ ಸುಮಾರು ೨೦೦ ಶಿಕ್ಷಕರು ಸಂಪು ಹೂಡಿದ್ದಾರೆ. ತಮಗೆ ಬರುತಿರುವ ಸಂಬಳದಿಂದ ತುಟ್ಟಿ ಕಾಲದಲ್ಲಿ ಸಾಲುವದಿಲ್ಲೆಂದೂ ಸಂಬಳ ಹೆಚ್ಚಿಸಿ ಸಂಕಷ್ಟ ನಿವಾರಿಸಿಕೊಳ್ಳಬೇಕೆಂದು ಸೂಚಿಸಿದ್ದಾರೆ.

## ಬೆಳಗಾವಿ

ಕರ್ನಾಟಕ ಮಹಾರಾಷ್ಟ್ರ ೮ ನೇ ಮೆಡಿಕಲ್ ಪರಿಷತ್ತು ಬೆಳಗಾವಿಯಲ್ಲಿ ಇದೆ ಮೇ ೨—೩—೪ ಈ ದಿನ ಕೂಡಿಸುವದು ಗೊತ್ತಾಗಿದೆ. ಡಾ. ಹೇರೇಕರರು ಸ್ವಾಗತಾಧ್ಯಕ್ಷರಾಗಿಯೂ ಡಾ. ಜೆ. ಬಿ ಪೋತದಾರ ಡಾ. ತೆರಗುಂಡಿ ಡಾ. ಖೋತ ಇವರು ಕಾರ್ಯದರ್ಶಿಗಳಾಗಿಯೂ ಆರಿಸಲ್ಪಟ್ಟಿರುವರು. ನಿಧಿ ಸಂಗ್ರಹ ಪ್ರಾರಂಭವಾಗಿದೆ.

ನಿಪಾಣಿಯ ಸೇವಾದಲದವರು ಮುಂಬಯಿ ಕಂದಾಯ ಮಂತ್ರಿಗಳು ತಮ್ಮಲ್ಲಿಗೆ ಬಂದಾಗ ಸ್ವಾಗತವಿತ್ತರು. ಹೈಸ್ಕೂಲ ಬೈಲಿನಲ್ಲಿ ಸಭೆ ಸೇರಿತ್ತು. ಮಂತ್ರಿಗಳು ಕಳ್ಳಪೇಟೆ ನಿರ್ಮೂಲನ ಜನತಾ ಸಂಘಟನೆಯ ಬಗ್ಗೆ ಮಾತಾಡಿದರು.

ಬೆಳಗಾವಿಯ ಗಿಲಗಂಚಿ ಅರ್ಟಾಳ ಹಾಯಸ್ಕೂಲಿನ ವಾರ್ಷಿಕೋತ್ಸವಕ್ಕೆ ಎಸ್. ಪಿ. ಕಾಲೇಜಿನ ಪ್ರಿನ್ಸಿಪಾಲ ಶ್ರೀ ಘಾಟೆಯವರ ನೇತೃತ್ವದಲ್ಲಿ ಜರುಗಿತು. ಅವರು ಪಾರಿತೋಷಕ ಹಂಚಿ ವಿದ್ಯಾರ್ಥಿಗಳಿಗೆ ಉಪದೇಶ ಮಾಡಿದರು.

ನಾವಲಗಟ್ಟಿ ಅರ್. ಡಿ. ಸಿ. ಕೇಂದ್ರ ಮರೀಕಟ್ಟಿಯ ಜನರಿಗೆ ಅನುಕೂಲವಾಗುವದಿಲ್ಲ. ಅಲ್ಲಿನ ಅಡತಿತೆಗಾರರು ಯೋಗ್ಯ ರೀತಿ ಹಂಚುವದಿಲ್ಲ. ಮೂರು ತಿಂಗಳುಗಳಿಂದ ಸೀದಾ ಪದಾರ್ಥಗಳು ಸಿಕ್ಕಿರುವದಿಲ್ಲ. ಜನರಿಗೆ ಬಹಳ ತೊಂದರೆಯಾಗಿದೆ ಆದುದರಿಂದ ಕಾಳು ಹಂಚುವ ಕೇಂದ್ರ ತಮ್ಮಲ್ಲಿಯೇ ಆಗಬೇಕೆಂದು ಮರೀಕಟ್ಟಿಯ ಜನರು ಕೇಳಿಕೊಂಡಿದ್ದಾರೆ.

ಮರಿಕಟ್ಟಿಯ ಆಣೇವಾರಿ ಎರಡೂವರೆ ಆಣೆ ಕೂಡ ಆಗುವದಿಲ್ಲ. ಆದುದರಿಂದ ಎರಡೂ ಹಪ್ತೆ ತಹಕೂಬ ಆಗಬೇಕು. ಎಲ್ಲ ಜನರಿಗೆ ಸೀದಾದಿಂದ ಕಾಳು ಸಿಕ್ಕಬೇಕೆಂದು ಕೇಳಿಕೊಂಡಿದ್ದಾರೆ. ಬಡವರಿಗೆ ಉಪಜೀವನಕ್ಕೆ ಅನುಕೂಲ ಮಾಡಿ ಕೊಡಲು ಪರಿಹಾರ ಕಾರ್ಯ ಪ್ರಾರಂಭಿಸಬೇಕೆಂದೂ ಕೇಳಿಕೊಂಡಿದ್ದಾರೆ.

ಇದೇ ಮಾರ್ಚ ೫ ರಿಂದ ಕರ್ನಾಟಕದಲ್ಲಿ ಪುರೋಗಾಮಿ ಪಕ್ಷದ ಮುಖಂಡರ ಸಂಚಾರ ಕಾರ್ಯಕ್ರಮವಿದ್ದಿತಷ್ಟೆ. ಆದರೆ ಕಲಕತ್ತೆಯಲ್ಲಿ ಇದೆ ಮಾರ್ಚ ೧೪ ರಿಂದ ೨೦ ರ ವರೆಗೆ ಪುರೋಗಾಮಿ ಪಕ್ಷದ ಕಾರ್ಯಕಾರಿ ಸಮಿತಿಯ ಸಭೆ ಕರೆದದ್ದರಿಂದ ಈ ಸಂಚಾರವನ್ನು ರದ್ದುಪಡಿಸಲಾಗಿದೆ. ಆದರೆ ನೇತಾಜಿ ಫಂಡದ ಹಣ ಕೂಡಿಸುವ ಕಾರ್ಯ ಮಾತ್ರ ಹಾಗೆ ಸಾಗಿಸಬೇಕಾಗಿ ರಾ. ಅ. ಮಂಡಗಿಯವರು ಬಿನ್ನವಿಸುತ್ತಾರೆ.

## ಬಳ್ಳಾರಿ

ಬಳ್ಳಾರಿ ಜಿಲ್ಲೆಯ ಲೋಕಲ್ ಬೋರ್ಡ ಮುನಸಿಪಾಲಿಟಿ ಚುನಾವಣೆಗಳಲ್ಲಿ ಕಾಂಗ್ರೆಸ ಅಧಿಕೃತ ಉಮೇದವಾರರಿಗೆ ಸರ್ಟಿಫಿಕೇಟು ಕೊಡುವ ಅಧಿಕಾರವನ್ನು ಆಂಧ್ರ ಕಾಂಗ್ರೆಸ ಕಮಿಟಿಗೆ ಕೊಡಲಾಗಿತ್ತಷ್ಟೆ ಆದರೀಗ ಬಳ್ಳಾರಿ ಹೊಸಪೇಟೆ ಶಿರಗುಪ್ಪ ಹರಪನಹಳ್ಳಿ ಕೂಡ್ಲಿಗಿ ಹಾಗು ಹಡಗಲಿ ತಾಲೂಕುಗಳ ಉಮೆದ್ವಾರರು ಬಳ್ಳಾರಿ ಜಿಲ್ಲಾ ಕಾಂಗ್ರೆಸ ಸಮಿತಿಯ ವತಿಯಿಂದ ಸರ್ಟಿಫಿಕೇಟ ಪಡೆಯಬಹುದೆಂದು ಮದ್ರಾಸ ಸರಕಾರ ಪ್ರಕಟಿಸಿದೆ.

ಬಳ್ಳಾರಿ ಜಿಲ್ಲಾ ಮುಸ್ಲಿಂ ಲೀಗಿನ ಅಧ್ಯಕ್ಷರಾದ ಶ್ರೀ. ಎಸ್. ಅಬ್ದುಲ್ ರಜಾಕರು ಪಕ್ಷದ ನಿಯಮಗಳನ್ನುಲ್ಲಂಘಿಸಿ ಮದ್ರಾಸ ಶಾಸನ ಶಾಸನ ಸಭೆಯ ಬಳ್ಳಾರಿ ಮುಸ್ಲಿಂ ಸ್ಥಳದ ಉಪಚುನಾವಣೆಗೆ ಅಧಿಕೃತ ಲೀಗ ಹುರಿಯಾಳು ಜನಾಬ ಹಾಜಿ ಮಹಮ್ಮದ ಇಸ್ಮಾಯಿಲ್ ಸಾಹೇಬರ ವಿರುದ್ಧ ಹುರಿಯಾಳಾಗಿ ನಿಂತದ್ದರಿಂದ ಅವರನ್ನು ಮುಸ್ಲಿಂ ಲೀಗಿನಿಂದ ಹೊರಗೆ ಹಾಕಲಾಗಿದೆ. ೫ ವರುಷ ಪ್ರಾಥಮಿಕ ಸದಸ್ಯರೂ ಅವರಾಗಲಾರರು.

## ವಿಜಾಪುರ

ಬಾಗಲಕೋಟೆ ಸಕ್ರಿ ಹಾಯಸ್ಕೂಲಿನ ಶಾರೀರಿಕ ಪಂದ್ಯಾಟಗಳ ಪಾರಿತೋಷಕ ಸಮಾರಂಭ ಪ್ರೊ. ಟಿ. ರುಬೆನ್ ಇವರ ಹಸ್ತದಿಂದ ಕಳೆದ ರವಿವಾರ ಜರುಗಿತು. ರುಬೆನ್‌ರು ಅಂದು ಮುಂಜಾನೆ ವಿಶ್ವವಿದ್ಯಾಲಯಗಳ ಸಂಬಂಧದಲ್ಲಿ ಇಂಗ್ಲಿಶಿನಲ್ಲಿ ಭಾಷಣ ಮಾಡುತ್ತ ಈಗಿನ ವಿಶ್ವವಿದ್ಯಾಲಯಗಳಲ್ಲಿನ ಲೋಪದೋಷಗಳನ್ನು ವಿವರಿಸಿ ನಮ್ಮ ಸಂಸ್ಕೃತಿಗನುಗುಣವಾಗಿ ವಿದ್ಯಾರ್ಥಿಗಳನ್ನು ತರಬೇತಿ ಮಾಡಲು ನಮ್ಮ ವಿಶ್ವವಿದ್ಯಾಲಯ ಪ್ರವರ್ತಿಸಬೇಕು. ದೇಶಭಾಷಾ ಮೂಲಕ ವಿಶ್ವವಿದ್ಯಾಲಯಗಳ ಶಿಕ್ಷಣ ನಡೆಯಬೇಕು ಮೊದಲಾಗಿ ಅಭಿಪ್ರಾಯ ಪಟ್ಟರು.

ಬಾಗಲಕೋಟೆಯ ಮುದ್ರಣಾಲಯದ ಕೆಲಸಗಾರರು ಹೆಚ್ಚಿನ ಸಂಬಳ ಬೇಕೆಂದು ಸಂಪು ಹೂಡಿರುವರು. ೬೦ ರೂಪಾಯಿಗಳ ವರೆಗೆ ಸಂಬಳಬೇಕೆಂದು ಅವರ ನೋಟೀಸಿನಲ್ಲಿ ಉಲ್ಲೇಖವಿದೆ.

ವಿಜಾಪುರ ಜಿಲ್ಲಾ ಲೋಕಲ್‌ಬೋರ್ಡ ಚುನಾವಣೆಗಳನ್ನು ಹೋರಾಡಬೇಕೆಂದು ಕಾಂಗ್ರೆಸ್ಸ ನಿರ್ಧರಿಸಿ ತಮ್ಮ ಉಮೇದ್ವಾರರನ್ನು ಗೊತ್ತುಪಡಿಸಿರುತ್ತಾರೆ. ಜಿಲ್ಲಾ ಸಿವಿಲ್ ಬೋರ್ಡಿನವರು ತಮ್ಮನ್ನು ಆರಿಸದಿದ್ದದರ ವಿರುದ್ಧ ಶ್ರೀ ಬಸವಗೌಡ ಪಾಟೀಲ ಹೊರತಿಯವರು ಮಾಡಿಕೊಂಡ ಅಪೀಲಿನ ವಿಚಾರಣೆ ಪ್ರಾಂತಿಕ ಸಿವಿಲ್ ಬೋರ್ಡಿನವರು ಮಾಡಿ ಅದನ್ನು ಕಿತ್ತಿ ಹಾಕಿದರು.

## ಉತ್ತರ ಕನ್ನಡ

ಸ್ವಾದಿಯ ಶ್ರೀ ತ್ರಿವಿಕ್ರಮದೇವರ ಮತ್ತು ಶ್ರೀ ವಾದಿರಾಜ ಸ್ವಾಮಿಗಳ ಮಹೋತ್ಸವ ಫಾಲ್ಗುಣ ಶುದ್ಧ ೯ ಶನಿವಾರದಿಂದ ಪ್ರಾರಂಭವಾಗಿ ಪೌರ್ಣಿಮಾ ಶುಕ್ರವಾರ ಬ್ರಹ್ಮರಥೋತ್ಸವ ಜರಗುವದು. ಕೀರ್ತನ ಪುರಾಣ ಉಪನ್ಯಾಸ ಮೊದಲಾದ ಕಾರ್ಯಕ್ರಮಗಳು ನಡೆಯುವವು. ಯಾವತ್ತರೂ ಬರಬೇಕಾಗಿ ಪಾರುಪತ್ಯಗಾರರು ಬಿನ್ನವಿಸುವರು.

## ಕನ್ನಡ ಸಂಸ್ಥಾನ

ಕೊಲ್ಹಾಪುರ ಸರಕಾರಿ ನನಕರರು ಸಂಪು ಹಿಂತೆಗೆದುಕೊಂಡಬಳಿಕ ಸಂಸ್ಥಾನ ಸರಕಾರದವರು ತಮ್ಮ ವಚನಭಂಗ ಮಾಡಿದ್ದಕ್ಕಾಗಿ ಸಾರ್ವಜನಿಕ ಧುರೀಣರಾದ ಶ್ರೀ ಮಾಧವರಾವ ಬಾಗಲರು ೨೧ ನೇ ತಾರೀಖಿನಿಂದ ಉಪವಾಸ ಶುರುಮಾಡಿದ್ದಾರಷ್ಟೆ. ಉಪವಾಸದ ನಾಲ್ಕನೇ ದಿನ ಅವರ ತೂಕ ೧೦ ಪೌಂಡ ಕಡಿಮೆಯಾಗಿದ್ದು ಕಂಡುಬಂತು. ಕೊಲ್ಹಾಪುರದಲ್ಲಿ ೨೪ ಕ್ಕೆ ಸಂಪೂರ್ಣ ಹರತಾಳ ಆಚರಿಸಲ್ಪಟ್ಟಿತು ತಾವು ವಚನಭಂಗ ಮಾಡಿಲ್ಲೆಂದು ಸಂಸ್ಥಾನ ಸರಕಾರದ ದಿವಾಣರು ಪ್ರಕಟನೆ ಹೊರಡಿಸಿದ್ದಾರೆ.

ಉರ್ದುವೆ ಭಾರತದ ರಾಷ್ಟ್ರಭಾಷೆಯಾಗಬಲ್ಲುದು ಈ ಉರ್ದು ಎಂದರೆ ಹಿಂದುಸ್ತಾನಿ. ಆ ಭಾಷೆಯ ಸ್ಥಾನವನ್ನು ಬೇರೆ ಯಾವ ಭಾಷೆಯೂ ಆಕ್ರಮಿಸಲಾರದು ಇಂಗ್ಲಿಶಿನ ಆಳಿಕೆಯು ಮುಗಿಯಿತು ಎಂದು ಸರ್. ಮಿರ್ಜಾ ಇಸ್ಮಾಯಿಲ್‌ರು ನಿಜಾಮ ಕಾಲೇಜಿನ ಮಹೋತ್ಸವದಲ್ಲಿ ಮಾತಾಡುತ್ತ ಹೇಳಿದರು.

ಕ್ರಾಂತಿವೀರ ನಾನಾ ಪಾಟೀಲರು ಪುಣೆಯಿಂದ ಕೊಲ್ಹಾಪೂರಕ್ಕೆ ಹೊರಟಾಗ ಜಿಲ್ಲಾ ಮ್ಯಾಜಿಸ್ಟ್ರೇಟರು ಹಾತಕಲಂಗಡೆ ಸ್ಟೇಶನದಲ್ಲಿ ಅವರ ಮೇಲೆ ಸಂಸ್ಥಾನ ಸೀಮೆಯಲ್ಲಿ ಕಾಲಿಡಬಾರದೆಂಬ ನೋಟೀಸು ಬಜಾಯಿಸಿದರು. ಮುಂದಿನ ಗಾಡಿಯಿಂದಲೆ ಅವರನ್ನು ಸಂಸ್ಥಾನ ಗಡಿ ದಾಟಿಸಿಬಿಟ್ಟರು.

ಲಂಚಗುಳಿತನ ಕಳ್ಳಪೇಟೆ ಲಾಭಬಡಕತನ ಮೊದಲಾದವುಗಳ ಬಗ್ಗೆ ಬರುವ ದೂರುಗಳನ್ನು ವಿಚಾರಿಸಲು ಮಿರಜ ಸಂಸ್ಥಾನ ಸರಕಾರವನ್ನು ಮಂತ್ರಿ ಎ. ಕೆ. ಕುರ್ಣಿಯವರ ನೇತೃತ್ವದಲ್ಲಿ ಕಾರ್ಯಪ್ರಾರಂಭಿಸಿರುವದು ಸಮಿತಿಯ ಸದಸ್ಯರು ಒಂದಿಲ್ಲೊಂದು ರೀತಿಯಿಂದ ಕಳ್ಳಪೇಟೆಗೆ ಸಂಬಂಧಿಸಿದವರಿರುವದರಿಂದ ಅವರ ಮೇಲೆ ತಮ್ಮ ವಿಶ್ವಾಸವಿಲ್ಲೆಂದು ಸಾರ್ವಜನಿಕ ಸಭೆಯಲ್ಲಿ ನಿರ್ಣಯಿಸಲಾಯಿತು.

---

ಶಿರ್ಶಿ ತಾಲೂಕಿನಲ್ಲಿ ಯಾವದೇ ಹಳ್ಳಿಯಲ್ಲಿ ರೈತರ ಸಭೆ ಆಗುತಿದ್ದರೆ ಅವುಗಳ ಸ್ಥಳ ಮತ್ತು ದಿನಗಳನ್ನು ತಿಳಿಸಿದರೆ ಅಲ್ಲಿಗೆ ಬಂದು ಸರಕಾರದವರು ರೈತರಿಗೆ ಕೊಟ್ಟಿರುವ ಸವಲತ್ತುಗಳನ್ನು ತಿಳಿಸಿ ಹೇಳಿ ವಿಚಾರವಿನಿಮಯ ಮಾಡಿ ಅಡಚಣೆಗಳನ್ನು ತಿಳಿದುಕೊಂಡು ಪರಿಹಾರ ಸೂಚಿಸಲಿಕ್ಕೆ ಅನುಕೂಲವಾಗುವದೆಂದು ಉತ್ತರ ಕನ್ನಡ ಜಿಲ್ಲಾ ಗ್ರಾಮೋದ್ಧಾರ ಮಂಡಳದ ಕಾರ್ಯದರ್ಶಿ ಸೂಳಗಾರ ವೆಂಕಟರಮಣ ಹೆಗಡೆಯವರು ತಿಳಿಸುತ್ತಾರೆ.

# ಗಾಂಧೀ ಯಾತ್ರೆ

## ಜಾತಿಭೇದ ಅಳಿಯಬೇಕು

“ ಹಿಂದೂ ಧರ್ಮ ಉಳಿಯಬೇಕಾದರೆ ಜಾತಿಭೇದ ಅಳಿಯಬೇಕು ” ಎಂದು ಗಾಂಧೀಜಿ ತಾ. ೧೨ ಕ್ಕೆ ಕಾಫಿಲತಾಲಿಯಲ್ಲಿ ಸಾಯಂ ಪ್ರಾರ್ಥನಾನಂತರ ಭಾಷಣ ಮಾಡುತ್ತ ಹೇಳಿದರು. ಅಸಾಮದ ಕಾಸಾರ ಜಿಲ್ಲೆಯಿಂದ ಬಂದ ಮಣಿಪುರಿ ಅಲ್ಪಸಂಖ್ಯಾಕರ ಶಿಷ್ಟಮಂಡಲವು ತಮ್ಮ ದೂರುಗಳನ್ನು ಉದ್ದೇಶಿಸಿ ಅವರು ಮಾತಾಡುತ್ತಿದ್ದರು. ಆ ಜಿಲ್ಲೆಯ ಎರಡು ಲಕ್ಷ ಮಣಿಪುರಿಗಳಿಗೆ ಶಾಸನ ಸಭೆಯಲ್ಲಿ ಪ್ರಾತಿನಿಧ್ಯ ಬೇಕೆಂದು ಶಿಷ್ಟಮಂಡಲದ ಅಭಿಪ್ರಾಯವಾಗಿತ್ತು. ಮಣಿಪುರಿಗಳನ್ನು ಅಸಾಮದ ಸವರ್ಣ ಹಿಂದುಗಳು ಸವರ್ಣರೆಂದೇ ಹೇಳುತ್ತಿದ್ದರೂ ಚುನಾವಣೆ ಕಾಲದಲ್ಲಿ ಮತಗಳನ್ನು ಗಳಿಸಲು ಮಾತ್ರ ಅವರ ಒಳಬರುತ್ತಿದ್ದರೇ ಹೊರತು ಅವರ ಹಿತ ಸಾಧನೆಗೆ ಮನಸು ಕೊಡುತ್ತಿದ್ದಿಲ್ಲವೆಂದು ಅವರು ದೂರಿಕೊಂಡರು. ಅದಕುತ್ತರವಾಗಿಯೆ ಗಾಂಧೀಜಿ ಮೇಲಿನಂತೆ ಹೇಳಿದ್ದು “ ನಾನು ಇಂಥ ಜಾತಿಯವನೆಂಬುದನ್ನು ಮರೆತುಬಿಟ್ಟು ಎಷ್ಟೋ ದಿನಗಳಾದವು. ಆದರಿಂದಲೇ ನಾನು ಭಂಗಿಯೆಂದು ಹೇಳಿಕೊಳ್ಳುತ್ತೇನೆ ಮತ್ತು ಹಾಗೆಯೆ ಆಚರಿಸುತ್ತೇನೆ. ಸವರ್ಣ ಹಿಂದುಗಳೆಂದರೆ ಬ್ರಹ್ಮಕ್ಷತ್ರಿಯ ವೈಶ್ಯರೆಂದರ್ಥವಾದರೆ ಬ್ರಿಟಿಶರು ಇಲ್ಲಿಂದ ಹೊರಟು ಹೋಗಿ ನಿಜವಾದ ಸ್ವಾತಂತ್ರ್ಯ ಸ್ಥಾಪನೆಯಾದಾಗ ಈ ಉಚ್ಚ ವರ್ಣದವರು ಅಲ್ಪಸಂಖ್ಯಾಕರಾಗಿ ಸರ್ವಥಾ ನಷ್ಟವಾಗಿ ಹೋಗುವರು. ಈ ಭೇದ ಭಾವಗಳು ಇನ್ನುಳಿಯಬಾರದು. ಆಗಲೇ ದಲಿತರೆನಿಸಿಕೊಳ್ಳುವವರಿಗೆ ನ್ಯಾಯ ದೊರಕುವದು.” ಪ್ರಾರ್ಥನಾಸಭೆ ಮುಸ್ಲಿಂ ಗೃಹಸ್ಥರೊಬ್ಬರ ಆಮಂತ್ರಣದ ಮೇರೆಗೆ ಮದರಸಾದ ಮುಂದೆ ನಡೆಯಿತು.

ಕಾಫೀಲ ತಾಲಿಗೆ ಬರುವಾಗ ದಾರಿಯಲ್ಲಿ ಹಿಂದೀ ರೆಯಕ್ಕಾಸ ಸಂಘ, ಇಂಗ್ಲಂಡಿನ ಮಿತ್ರ ಸೇವಾ ಸಂಘ, ಅಮೇರಿಕೆಯ ಮೊನೊನಾಯ್ಟ ಕೇಂದ್ರ ಸಮಿತಿಗಳು ಜತೆಯಾಗಿ ನಡೆಸುತ್ತಿರುವ ಪರಿಹಾರ ಶಿಬಿರಕ್ಕೆ ಗಾಂಧೀಜಿ ಭೆಟ್ಟಿಕೊಟ್ಟು ಅಲ್ಲಿಯ ಕಾರ್ಯವನ್ನು ಪರಿಶೀಲಿಸಿದರು.

## ವರ್ಗರಹಿತ ಭಾರತ

ಅದೇ ಭಾಷಣದಲ್ಲಿ ಅವರು ತಮ್ಮ ಕನಸಿನ ಭಾರತದಲ್ಲಿ ಜಾತಿರಹಿತ ವರ್ಗರಹಿತ ಜನರು ಪೂರ್ಣ ಧಾರ್ಮಿಕ ಮತ್ತು ಸಾಂಸ್ಕೃತಿಕ ಸ್ವಾತಂತ್ರ್ಯದಲ್ಲಿ ಬಾಳುವರೆಂದು ಸಾರಿದರು. ಎಲ್ಲರೂ ಪೂರ್ಣ ಸೌಹಾರ್ದದಿಂದ ಬಾಳುವರು. ಅಲ್ಲಿ ಲಕ್ಷಾಧೀಶರೂ ಇರಲಾರರು. ಭಿಕ್ಷಾಧೀಶರೂ ಇರಲಾರರು ಈ ಕನಸಿನ ಸಿದ್ಧಿಗಾಗಿ ಪ್ರಾಣಗಳನ್ನಾದರೂ ಅರ್ಪಿಸಲು ಸಿದ್ಧನಿದ್ದೇನೆಂದು ಅವರು ಸಾರಿಸಾರಿ ಹೇಳಿದರು. ಯಾದವೀ ಯುದ್ಧದಿಂದ ಛಿನ್ನ ವಿಚ್ಛಿನ್ನವಾದ ಹಿಂದುಸ್ತಾನವನ್ನು ಕಾಣುವ ಮೊದಲೇ ಕಣ್ಮುಚ್ಚುವೆನೆಂದು ಅವರು ಬಯಸಿದರು.

ಅಸ್ಪೃಶ್ಯತೆ ಪೂರ್ಣ ನಷ್ಟವಾದ ಮೇಲೆ ಜಾತಿಭೇದ ಉಳಿಯಲಾರದು. ಜಾತಿಭೇದ ಇದ್ದಷ್ಟು ದಿನ ಅಸ್ಪೃಶ್ಯರು ಮೇಲ್ಜಾತಿಗೆ ಸೇರ ಬಯಸುವರು. ಅದು ಸಾಧ್ಯವಿಲ್ಲ. ಅಂಥ ಪ್ರಯತ್ನವಾದರೆ ಮೇಲ್ಜಾತಿಯವರಿಗೂ ಅಸ್ಪೃಶ್ಯರಿಗೂ ಯುದ್ಧವಾದೀತು. ಜಾತಿಭೇದವಳಿದರೆ ಎಲ್ಲರೂ ಕೇವಲ ಶುದ್ಧ ಹಿಂದುಗಳಾಗುವರು ಅಸ್ಪೃಶ್ಯರೂ ತಮ್ಮೊಳಗಿನ ಭೇದಗಳನ್ನು ತೆತ್ತು ಜಾತಿ ವಿಶಾಲ ಹಿಂದೂ ಜನಸಾಗರದಲ್ಲಿ ಲೀನರಾಗಲು ಪ್ರಯತ್ನಿಸಬೇಕಲ್ಲದೆ ವಿಶೇಷ ಹಕ್ಕು ಬಾಧ್ಯತೆಗಳಿಗಲ್ಲ, ಎಂದು ಅವರು ಉಪದೇಶಿಸಿ

ನೌಖಾಲಿಯ ಹಿಂದುಗಳು ಒಂದೇ ಕಡೆ ಪ್ರತ್ಯೇಕ ಗುಂಪಾಗಿ ವಾಸಿಸಿ ಪ್ರತ್ಯೇಕ ಕಾರಖಾನೆಗಳನ್ನು ಸ್ಥಾಪಿಸಬೇಕೆಂಬ ವಿಚಾರಕ್ಕೆ ಗಾಂಧಿಜಿ ತಿರಸ್ಕಾರ ವಿರೋಧ ಪ್ರದರ್ಶಿಸಿದರು. ಅದು ಪಾಕಿಸ್ತಾನಗಳನ್ನು ಹಿಂದುಸ್ತಾನದಲ್ಲೆಲ್ಲ ಉಂಟುಮಾಡುವದೆಂದು ಅವರ ಅಭಿಪ್ರಾಯವಾಗಿತ್ತು.

## ಜಾತೀಯ ದೃಷ್ಟಿಕೋನ ಹೋಗಲಿ

ಪಶ್ಚಿಮ ಕೆರೋವಾದಿಂದ ರಾಯಪುರಕ್ಕೆ ತಾ. ೧೫ ಕ್ಕೆ ಬಂದು ಮುಟ್ಟಿದ ಗಾಂಧೀಜಿ ಇಲ್ಲಿ ಎರಡು ದಿನ ವಸತಿ ಮಾಡಿದರು. “ಜಾತೀಯ ದೃಷ್ಟಿಯಲ್ಲಿಯೇ ಜನರು ಯಾವಾಗಲೂ ಮಗ್ನರಾಗಿರುವಂತೆ ತೋರುತ್ತದೆ. ಜಾತೀಯ ದೃಷ್ಟಿಕೋನ ಬಿಟ್ಟು ಅವರು ಮೇಲಕ್ಕೇರಿದರೆಂದರೆ ಪ್ರತಿಯೊಂದು ಪ್ರಶ್ನೆಯನ್ನು ವಿವೇಕದ ಒರೆಗೆ ಹಚ್ಚಿದಾಗ ಅವರು ತಪ್ಪು ದಾರಿ ಹಿಡಿಯಲಾರರು” ಎಂದು ಪಶ್ಚಿಮ ಕೆರೋವಾದ ಭಾಷಣದಲ್ಲಿ ಅವರು ತಾ. ೧೪ ಕ್ಕೆ ಹೇಳಿದರು ಹೊಲದ ಉತ್ಪನ್ನದಲ್ಲಿ ಮೂರರಲ್ಲೊಂದಂಶ ಮಾತ್ರ ಒಡೆಯನಿಗೆ ಸಲ್ಲಬೇಕೆಂಬ ಚಳವಳಿಗೆ ಗಾಂಧೀಜಿ ನೈತಿಕ ಬೆಂಬಲವಿತ್ತುದರಿಂದ ಮಧ್ಯಮವರ್ಗದ ಕುಟುಂಬಗಳು ಹಾಳಾಗಿ ಹೋಗಬಹುದೆಂದು ದೂರಲಾಗಿತ್ತು. ಅದಕ್ಕೆ ಗಾಂಧೀಜಿಯ ಉತ್ತರ ಮೇಲಿನಂತಿತ್ತು.

## ಬಹಿಷ್ಕಾರ ಪ್ರಶ್ನೆ

ರಾಯಪುರಾದಲ್ಲಿ ಅವರು ಸಾಯಂ ಪ್ರಾರ್ಥನೆಯ ಸಭೆಯಲ್ಲಿ ಜಾತೀಯ ಬಹಿಷ್ಕಾರದ ಪ್ರಶ್ನೆಯನ್ನೆತ್ತಿ ಮಾತಾಡಿದರು. ನೌಖಾಲಿಯಲ್ಲಿ ಹಿಂದುಗಳನ್ನು ಮುಸ್ಲಿಮರು ಪೂರ್ಣವಾಗಿ ಬಹಿಷ್ಕರಿಸಿ ಬಿಡಬೇಕೆಂಬ ಮಾತು ನಡೆದಿತ್ತೆಂದು ಅವರಿಗೆ ದೂರಲಾಗಿತ್ತು. ಮೊದಲು ದಂಗೆಯ ಕಾಲದಲ್ಲಿ ಕೂಡ ಹಿಂದುಗಳೊಡನೆ ಸಹಕರಿಸುತ್ತ ಬಂದಿದ್ದ ಮುಸ್ಲಿಮರನ್ನು ಕೂಡ ಸಾಮಾಜಿಕ ಬಹಿಷ್ಕಾರದ ಭಯತೋರಿಸಿ ಪರಾವೃತ್ತಗೊಳಿಸುವ ಪ್ರಯತ್ನ ನಡೆಸಲಾಗಿದೆಯಂತೆ. ಈ ಬಗೆಯ ಸುದ್ದಿ ತಮಗೆ ಗೊತ್ತಿದೆಯೆಂದೂ ಆದರೆ ಅವು ವ್ಯಾಪಕವಾಗಿರದೆ ಅಲ್ಲೊಂದು ಇಲ್ಲೊಂದು ಇರಬಹುದೆಂದು ಭಾವಿಸುವದಾಗಿಯೂ ಗಾಂಧೀಜಿ ಹೇಳಿದರು.

ಆದರೆ ಗುಜರಾಥ ಮತ್ತು ಪಂಜಾಬದಿಂದ ತಮ್ಮನ್ನು ಕಾಣಲು ಬಂದ ಇಬ್ಬರು ಮುಸ್ಲಿಂ ಗೆಳೆಯರಿಗೆ ನೌಖಾಲಿಯ ಮುಸ್ಲಿಮರು ಧೀಮಾರಿ ಹಾಕಿದರೆಂದು ಕೇಳುತ್ತೇನೆಂದು ಗಾಂಧೀಜಿ ಹೇಳಿದರು. “ಕೇವಲ ಅಲ್ಪಸಂಖ್ಯಾಕರೆಂಬ ಕಾರಣಕ್ಕಾಗಿ ಸಾವಿರಾರು ವರ್ಷಗಳಿಂದ ಬಾಳಿಕೊಂಡು ಬಂದ ಮನೆಮಾರುಗಳಿಂದ ಯಾರನ್ನಾದರೂ ಹೊರಗಟ್ಟುವದು ಹಿಂದೂ, ಮುಸ್ಲಿಂ, ಕ್ರಿಶ್ಚನ್ ಅಥವಾ ಇನ್ನಾವ ಧರ್ಮಕ್ಕನುಸಾರವಾಗಿ ನ್ಯಾಯವಾಗದು” ಎಂದು ಅವರು ತಿಳಿಸಿದರು. “ಈ ಭಯ ಪ್ರದರ್ಶನ ವಿರಳವಾಗಿದ್ದರೆ ಅದನ್ನು ಗಮನಿಸದಿರುವದೇ ಲೇಸು. ಅದು ಬಹಳ ವ್ಯಾಪಕವಾಗಿದ್ದರೆ ಸರಕಾರ ಅದನ್ನು ವಿಚಾರಿಸಬೇಕು. ಸರಕಾರವೂ ಬಹಿಷ್ಕಾರ ಧೋರಣೆಯನ್ನನುಸರಿಸಿದರೆ ಅಲ್ಪಸಂಖ್ಯಾಕರು, ಯೋಗ್ಯ ಪರಿಹಾರ ದೊರೆತರೆ, ಹೊರಟು ಹೋಗಬಹುದು ”

ತಾ ೧೭ಕ್ಕೆ ಗಾಂಧೀಜಿ ಪ್ರಾರ್ಥನಾ ಸಭೆಯಲ್ಲಿ ಫಜಲುಲ್ ಹಕ್ಕರು ತಮ್ಮನ್ನು (ಗಾಂಧೀಜಿಯನ್ನು) ನೌಖಾಲಿಯಿಂದ ಹೊರಗೆ ಹಾಕಬೇಕೆಂದು ಭಾಷಣ ಮಾಡಿದುದು ದುರ್ದೈವದ ಸಂಗತಿಯೆಂದು ಹೇಳಿದರು. ನೌಖಾಲಿಯಲ್ಲಿ ತಾವು ಜಾತೀಯ ಮನಃಕಷಾಯ ಬೆಳೆಸುವಂತೆ ತಮಗನಿಸುವದಿಲ್ಲೆಂದು ಅವರು ಹೇಳಿದರು.

## ರಾಮ—ರಹಿಂ— ಕೃಷ್ಣ— ಕರೀಮ

ರಾಯಪುರದಲ್ಲಿ ತಾ ೧೬ ಕ್ಕೆ ಗಾಂಧೀಜಿ ೩೦೦ ಜನರು ಭಾಗವಹಿಸಿದ್ದ ಅಂತರಜಾತೀಯ ಭೋಜನ ಸಮಾರಂಭಕ್ಕೆ ದರ್ಶನವಿತ್ತರು. ಮುಸ್ಲಿಮರನ್ನೂ ಈ ಸಮಾರಂಭಕ್ಕೆ ನೀವು ಬರಗೊಡವಿರೋ ಎಂದು ಗಾಂಧೀಜಿ ಕೇಳಿದಾಗ ಸಂಘಟಕರು ಚಟನೆ ಉತ್ತರವಿತ್ತರು “ ನಾವು ಎಲ್ಲರಿಗೂ ಸವರ್ಣೀಯರಿರಲಿ, ನಾಮಶೂದ್ರರಿರಲಿ ನಮ್ಮ ಹೃದಯ ತೆರೆದಿದ್ದೇವೆ. ಮುಸ್ಲಿಮರೂ ತಮ್ಮ ಹೃದಯವನ್ನು ತೆರೆದು ನಮ್ಮೊಡನೆ ಸೇರಬಹುದು ನೀವು ಈಗಾಗಲೆ ರಾಮ-ರಹಿಮ, ಕೃಷ್ಣ ಕರೀಮ, ಅಲ್ಲಾ ಈಶ್ವರರನ್ನು ಒಂದು ಗೂಡಿಸಿದ್ದೀರಿ. ನಿಮ್ಮ ದಾರಿಯನ್ನೆ ನಾವೂ ಅನುಸರಿಸುವೆವು” ‘ರಘುಪತಿ ರಾಘವ’ ಭಜನೆಗೆ ಈಚೆಗೆ ಗಾಂಧೀಜಿಯ ಅನುಮತಿಯಿಂದ “ಭಜ ಮನ ಪ್ಯಾರೇ ರಾಮ ರಹೀಮ, ಭಜಮನ ಪ್ಯಾರೇ ಕೃಷ್ಣ ಕರೀಮ” ಎಂಬ ಪಂಕ್ತಿಯನ್ನು ಸೇರಿಸಲಾಗಿದ್ದನ್ನು ಲಕ್ಷಿಸಿ ಅವರು ಇದನ್ನು ನುಡಿದರು.

ಮೌಲಾನಾ ಬದ್ರುದ್ದೀನ್ ಸಾಹೇಬರು ಜುಮ್ಮಾ ಮಸೀದಿಗೆ ಗಾಂಧೀಜಿಯನ್ನು ಹಾರ್ದಿಕವಾಗಿ ಸ್ವಾಗತಿಸಿದರು. ಇನ್ನೊಂದು ಮಸೀದೆಯ ಮೌಲವಿಗುವರು ವಿಶ್ವಸ್ತರ ಅಪ್ಪಣೆ ಪಡೆಯಲು ಸಮಯವಿಲ್ಲೆಂದು ಅವರನ್ನು ಕರೆಯಲಿಲ್ಲ.

ತಾ. ೧೭ ಕ್ಕೆ ಗಾಂಧೀಜಿ ದೇವಿಪುರದಲ್ಲಿಳಿದರು.

### ಶ್ರೀನಗರದಲ್ಲಿ ಮಹಾತ್ಮರು

ನೌಖಾಲಿ ಯಾತ್ರೆಯಲ್ಲಿ ೫-೩-೪೭ ಕ್ಕೆ ಮಹಾತ್ಮರು ಶ್ರೀನಗರದಲ್ಲಿದ್ದಾಗ ತೆಗೆದ ಚಿತ್ರವಿದು.

ಛಾಯಾ ಚಿತ್ರಗಾರ— ನಾರಾಯಣರಾವ ಕುಲಕರ್ಣಿ ವಿಜಾಪುರ.

## ತಿಪ್ಪೇರಾಕ್ಕೆ

ತಾ ೧೮ಕ್ಕೆ ಅಲುನ್ನಾ ಹಳ್ಳಿಗೆ ಗಾಂಧೀಜಿ ಬಂದಾಗ ನೌಖಾಲಿಯನ್ನು ಬಿಟ್ಟು ತಿಪ್ಪೇರಾದ ಸಂಕ್ರಸ್ತ ಭಾಗದಲ್ಲಿ ಕಾಲಿಟ್ಟಂತಾಯಿತು.

ಅಲುನ್ನಾದ ಪ್ರಾರ್ಥನಾ ಸಭೆಯಲ್ಲಿ ಗಾಂಧೀಜಿಗೆ ಮತ್ತೆ ಅಲ್ಪಸಂಖ್ಯಾಕರ ಸ್ಥಾನಾಂತರದ ಪ್ರಶ್ನೆಯನ್ನು ಕೇಳಲಾಯಿತು. ಯೋಗ್ಯ ಪರಿಹಾರವನ್ನು ಸರಕಾರವೂ ಸ್ಥಾನಿಕ ಬಹುಸಂಖ್ಯಾಕರೂ ಕೊಟ್ಟರೆ ಅಲ್ಪಸಂಖ್ಯಾಕರು ಹೋಗಬಹುದೆಂದು ಗಾಂಧೀಜಿ ಉತ್ತರವಿತ್ತರು. ಅಲ್ಪಸಂಖ್ಯಾಕರ ವಾಸ್ತವ್ಯವನ್ನು ಸಹಿಸಲಾರದಷ್ಟು ಮಟ್ಟಿಗೆ ಬಹುಸಂಖ್ಯಾಕರ ಮನಸ್ಸು ದ್ವೇಷಪೂರ್ಣವಾಗಿದ್ದರೆ ಸರಕಾರವೇನು ಮಾಡಬೇಕು? ಆಯುಧ ಬಲದಿಂದ ಅಲ್ಪ ಸಂಖ್ಯಾಕರನ್ನು ಅದು ರಕ್ಷಿಸುವದು ಸರಿಯಲ್ಲ. ರಾಮಧುನಿ ಭಜನೆಯನ್ನಾಗಲಿ ಕೈಚಪ್ಪಾಳೆಯಿಂದ ತಾಳ ಹಾಕುವದನ್ನಾಗಲಿ ಮುಸ್ಲಿಮರು ಸೈರಿಸದಿದ್ದರೆ ಹಿಂದುಗಳು ಹೊರಟು ಹೋಗಬಹುದೆಂದು ಹೇಳಲು ತಾವು ಹಿಂದೆ ಮುಂದೆ ನೋಡುವದಿಲ್ಲೆಂದು ಗಾಂಧೀಜಿ ಹೇಳಿದರು, ಇದು ಹಿಂದೂ ಬಹುಸಂಖ್ಯಾಕ ಪ್ರಾಂತಗಳಿಗೂ ಅಷ್ಟೇ ಅನ್ವಯಿಸುವದು.

# ಪ್ರಶ್ನ—ಪೆಟ್ಟಿಗೆ

## ಬೌದ್ಧಿಕ ಮತ್ತು ಶಾರೀರಿಕ ಕೆಲಸ

ಪ್ರಶ್ನೆ–ರವೀಂದ್ರನಾಥ ಇಲ್ಲವೆ ರಮಣರಂಥವರು ತಮ್ಮ ಉಪಜೀವನವನ್ನು ಶಾರೀರಿಕ ಶ್ರಮದಿಂದ ಸಾಗಿಸಬೇಕೆಂದು ಏಕೆ ಒತ್ತಾಯ ಪಡಿಸಬೇಕು? ಅದು ಕೇವಲ ಹಾಳು ಅಲ್ಲವೆ? ಬುದ್ಧಿ ಜೀವಿಗಳು ಶಾರೀರಿಕ ಶ್ರಮಮಾಡುವವರ ಸರಿಸಮಾನರೆಂದೇ ಏಕೆ ಭಾವಿಸಬಾರದು? ಅವರಿಬ್ಬರೂ ಉಪಯುಕ್ತ ಸಾಮಾಜಿಕ ಕಾರ್ಯವನ್ನೆ ಮಾಡುತ್ತಿರುವರು.

ಉತ್ತರ— ಬೌದ್ಧಿಕ ಕಾರ್ಯ ಮಹತ್ವದ್ದಿದ್ದು ಜೀವನ ಯೋಜನೆಯಲ್ಲಿ ನಿಃಸಂಶಯವಾಗಿ ಅದಕ್ಕೊಂದು ಸ್ಥಾನವಿದೆ. ಆದರೆ ನಾನು ಒತ್ತಿ ಹೇಳುವದೆಂದರೆ ಶಾರೀರಿಕ ಶ್ರಮದ ಅವಶ್ಯಕತೆಯನ್ನು ಯಾವ ಮನುಷ್ಯನೂ ಆ ಕಾರ್ಯದಿಂದ ಮುಕ್ತನಾಗಲಾರನೆಂದು ನಾನು ಹೇಳಬಯಸುತ್ತೇನೆ. ಆ ತಾಕ ಶ್ರಮದಿಂದ ಬೌದ್ಧಿಕ ಉತ್ಪಾದನೆಯಲ್ಲಿ ಸುಧಾರಣೆಯಾಗುವದು. ಪ್ರಾಚೀನ ಕಾಲದಲ್ಲಿ ಬ್ರಾಹ್ಮಣರು ಬುದ್ಧಿಯ ಕಾರ್ಯಮಾಡುತ್ತಿರುವಾಗಲೆ ಶಾರೀರಿಕ ಶ್ರಮವನ್ನು ಮಾಡುತ್ತಿದ್ದರೆಂದು ಹೇಳುವ ಸಾಹಸ ಮಾಡುತ್ತೇನೆ: ಅವರು ಹಾಗೆ ಮಾಡುತ್ತಿದ್ದಿಲ್ಲವಾದರೂ ಸದ್ಯದಲ್ಲಿ ಹಾಗೆ ಮಾಡುವದು ಅವಶ್ಯವೆಂದು ಸಿದ್ಧವಾಗಿದೆ. ಈ ಸಂಬಂಧದಲ್ಲಿ ಟಾಲಸ್ಟಾಯರ ಜೀವನದತ್ತ ನೋಡಲು ಹೇಳಬಯಸುವೆ ರಶಿಯದ ಒಕ್ಕಲಿಗ ಬಾಂಡರೆವ್‌ಸು ಮೊದಲು ತನ್ನ ದೇಶದಲ್ಲಿ ಪ್ರತಿಪಾದಿಸಿದ ‘ದುಡಿಮೆಗೆ ತಕ್ಕ ರೊಟ್ಟಿ’ಯ ತತ್ವವನ್ನು ಕಾರ್ಲಾಯಿಲ್ ಹೇಗೆ ಪ್ರಸಿದ್ಧಪಡಿಸಿದರೆಂಬುದನ್ನೂ ನಾನು ಉಲ್ಲೇಖಿಸಬಯಸುವೆ.

ಮೋ. ಕ. ಗಾಂಧಿ

(೮ ನೇ ಪುಟದಿಂದ)

ಮಾತು ಕೇಳಬರುತ್ತದೆ. ಕವಾಯಿತಿನಲ್ಲಿ ಶಿಸ್ತು ಬೇಕು, ಶಿಕ್ಷಣದಲ್ಲಿ ಶಿಸ್ತು ಬೇಕು, ಭಕ್ತಿಯಲ್ಲಿಯೂ ಶಿಸ್ತಿನ ಅವಶ್ಯಕತೆ ಇದೆ.

ಮುಖ್ಯ ದೇವತೆ ಕಳವಾಗಿ ಹೋಗಿದ್ದರಿಂದ ಮಾಯಾವೀ ದೇವತೆಗಳು ಬಲವನ್ನು ಪಯೋಗಿಸುತ್ತಿರುವವು ಎಂಬುದೇ ಇದರ ಭಾವಾರ್ಥ ಸೂರ್ಯಾಸ್ತವಾದ ಕೂಡಲೆ ನಕ್ಷತ್ರಗಳು ಪಸ್ತಿಸಬೇಕಲ್ಲವ ?

ಈಗಂತೂ ಈ ದೇವತೆಗಳು ನಿಜಾವಲಂಬಿಗಳಾಗಿರುವವು. ತಮ್ಮಷ್ಟಕ್ಕೆ ತಾವು ಎಂಬುದೆ ಈ ನಿಜಾವಲಂಬನ. ದುಡ್ಡಿಗಾಗಿಯೆ ದುಡ್ಡು ಎಂದು ಕಂಜೂಷ ಎನ್ನುವನು. ವೆಚ್ಚ ಮಾಡುವದಕ್ಕಾಗಿ ದುಡ್ಡು ಅಲ್ಲ. ಸೇವೆಗಾಗಿಯೆಂತೂ ಅಲ್ಲವೇ ಅಲ್ಲ. ಸಾಹಿತ್ಯಕ್ಕಾಗಿಯೆ ಸಾಹಿತ್ಯ, ಜೀವನಕ್ಕಾಗಿ ಅಲ್ಲ ಎಂದು ಸಾಹಿತಿ ಹೇಳುವನು. ಕಲೆಗಾಗಿಯೆ ಕಲೆಯೆಂದು ಕಲಾಗಾರನೆನ್ನುವನು. ಕಾಲದ ಸಲುವಾಗಿ ಕಲೆ ಇರುವದೆಂಬುದು ಅವನಿಗೆ ಹೊಳೆಯದು. ಕಾಲ ಅದನ್ನು ಹತ್ತಿಕ್ಕಿ ಬಿಡುತ್ತಿದೆ. ಸೇವೆಗಾಗಿ ಅದನ್ನು ಪಯೋಗಿಸುತ್ತಿದ್ದರೆ ಅದರ ಸದುಪಯೋಗವಾದಂತಾಗುತ್ತಿತ್ತು.

ಸತ್ತಾ ಇದು ಶಾಸನ ಮಾಡುವ ದೇವತಾ ಎಂದು ಸತ್ತಾ ವಾದಿಗಳು ಹೇಳುತ್ತಿರುವರು. ಅದಕ್ಕಾಗಿಯೆ ಅದರ ಅಸ್ತಿತ್ವವೆಂದು ಅವರು ಹೇಳುತ್ತಿರುವರು. ಸತ್ತೆಯನ್ನು ಸಂಪಾದಿಸುವುದಕ್ಕಾಗಿ ಸೇವೆಮಾಡಿದರೂ ನಡೆಯುವದೆಂದೂ ಸತ್ತೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಸೇವೆ ಮಾಡಿದರೆ ಅಡ್ಡಿಯಿಲ್ಲೆಂದೂ ಅವರ ಅಭಿಪ್ರಾಯ. ಅವರ ಸತ್ತಾ ಇದು ಸ್ವಯಂಭೂ ಇರುವದು.

ಸಾಮ್ರಾಜ್ಯವಾದಿಗಳನ್ನು ಹಿಡಿದು ಹಿಂದೀ ಸಂಸ್ಥಾನಿಕರ ವರೆಗೆ ಎಲ್ಲರೂ ಈ ವಿಷಯದಲ್ಲಿ ಏಕಾಭಿಪ್ರಾಯವುಳ್ಳವರಾಗಿದ್ದಾರೆ.

೧೩-೩-೪೭

—ವಿನೋಬಾ

ಕರ್ಮವೀರ

# ಹರಿಜನ  ಪುರವಣಿ

## ನೈಸರ್ಗಿಕ ಆಹಾರ— ಔಷಧ

ಲೆ:— ಜೆ. ಸಿ. ಕುಮಾರಪ್ಪಾ

ಮಾನವಪೋಷಣೆಯಲ್ಲಿ ಮುಖ್ಯ ಆಹಾರ ಮತ್ತು ಔಷಧಗಳಲ್ಲಿಯ ಭೇದವನ್ನು ಮನುಷ್ಯನು ತಿಳಿದುಕೊಳ್ಳುವನು. ಸಾಮಾನ್ಯವಾಗಿ ಮುಖ್ಯ ಆಹಾರ ಪದಾರ್ಥಗಳನ್ನು ಹೆಚ್ಚಾಗಿ ತಿನ್ನಲಾಗುತ್ತದೆ; ಮಾನವ ಶರೀರಕ್ಕೆ ಅವಶ್ಯವಾದ ಮೂಲ ವಸ್ತುಗಳು-ಸಮಪ್ರಮಾಣದಲ್ಲಿ ಅಲ್ಲವೆ ಸಮಸಮೀಪ ಪ್ರಮಾಣದಲ್ಲಿ ಅವದರಲ್ಲಿರುವವು. ಉದಾಹರಣಾರ್ಥವಾಗಿ ಹಾಲಿನಲ್ಲಿ ಕೊಬ್ಬು, ಪ್ರೊಟೀನ, ಲೋಹ, ಎ ಆಹಾರ ಸತ್ವ ಇರುವವಲ್ಲದೆ ಅಂಥವೆ ಬೇರೆಪದಾರ್ಥಗಳೂ ಇರುವವು. ಆದರೆ ಯಾವದೇ ಕಾರಣದಿಂದ ರೋಗಿಯೊಬ್ಬನ ಶರೀರಕ್ಕೆ ಹಾಲಿನಲ್ಲಿರುವದಕ್ಕಿಂತ ಹೆಚ್ಚಿನ ಪ್ರಮಾಣದ 'ಎ' ಆಹಾರಸತ್ವ ಬೇಕಾದರೆ ಈ ಆಹಾರ ಸತ್ವವನ್ನು ಶಾರ್ಕಲಿವರ ಆಯಿಲ್ ಅಲ್ಲವೆ ಕಾಡ್ಲಿವರ ಆಯಿಲ್ ಮೊದಲಾದವುಗಳಿಂದ ಅವನಿಗೆ ಒದಗಿಸಲಾಗುತ್ತದೆ. ಆದುದರಿಂದ ಸಾಮಾನ್ಯವಾದ ಆರೋಗ್ಯಕರ ಆಹಾರ ಔಷಧಗಳಿಂದ ಭಿನ್ನವಾಗಿದೆಂದು ನಾವು ಕಾಣುತ್ತೇವೆ. ಆಯಾ ರೋಗಿಯ ಅವಶ್ಯಕತೆ ಮತ್ತು ಪರಿಸ್ಥಿತಿಗಳಿಗನುಗುಣವಾಗಿ ಆಯಾ ಔಷಧಗಳ ಪ್ರಮಾಣವನ್ನು ನಿರ್ಧರಿಸಲಾಗುತ್ತದೆ. ವೃದ್ಧ ಮನುಷ್ಯನಿಗೆ ಮಧ್ಯಮ ವಯಸ್ಸಿನ ಮನುಷ್ಯನ ಪ್ರಮಾಣಕ್ಕಿಂತ ಭಿನ್ನ ಪ್ರಮಾಣದಲ್ಲಿ ಔಷಧ ಕೊಡಬೇಕಾಗುತ್ತದೆ. ಮಕ್ಕಳು ಮತ್ತು ಮಧ್ಯಮ ವಯಸ್ಸಿನ ಮನುಷ್ಯರ ಔಷಧ ಪ್ರಮಾಣಗಳಲ್ಲಿಯೂ ಭೇದವಿದೆ.

ರಾತ್ರಿ ಕ್ಲಬ್ಬುಗಳಲ್ಲಿ ನರ್ತನಾದಿಗಳಲ್ಲಿ ಭಾಗವಹಿಸುವದಕ್ಕಾಗಿ ಹಲವು ಮನುಷ್ಯರಿಗೆ ನಿಸರ್ಗತಃ ಸಿಕ್ಕುವ ಉತ್ತೇಜನಕ್ಕಿಂತ ಹೆಚ್ಚಿನ ಉತ್ತೇಜಕಶಕ್ತಿ ಬೇಕಾಗುತ್ತದೆ ಅಂಥವರಿಗೆ ಉತ್ತೇಜಕ ಔಷಧಗಳನ್ನು ಕೊಡಬೇಕಾಗುತ್ತದೆ. ಅಂಥ ವ್ಯಕ್ತಿಗಳು ಮಾರ್ಫಿಯಾ ಇಂಜಕ್ಶನ್‌ಗಳನ್ನು ಮತ್ತು ಅಂಥ ಉತ್ತೇಜಕ ಔಷಧಗಳನ್ನು ತೆಗೆದುಕೊಂಡು ಹೆಚ್ಚಿನ ಉತ್ಸಾಹ ಶಕ್ತಿಯನ್ನು ಪಡೆಯುತ್ತಾರೆ. ಆ ಕಾಲಕ್ಕೆ ಅದರಲ್ಲಿ ಉತ್ಸಾಹ ಶಕ್ತಿ ಇಲ್ಲದಂತೆ ಕಾಣುತ್ತದೆ. ಆದರೆ ಮುಂದೆ ಅವರಿಗೆ ಉತ್ತೇಜಕ ಪದಾರ್ಥಗಳ ಸೇವನೆಗಾಗಿ ಅಳಲಬೇಕಾಗುತ್ತದೆ. ಆದುದರಿಂದ ಶರೀರದ ಸೂಕ್ಷ್ಮ ಇಂದ್ರಿಯಗಳ ಮೇಲೆಹೆಚ್ಚಿನ ಭಾರವನ್ನು ಹಾಕದೆ ಸಾಮಾನ್ಯವಾದ ಜೀವನವನ್ನು ಸಾಗಿಸಬಯಸುವವರೆಲ್ಲ ಸಾಮಾನ್ಯ ಆಹಾರ ಪದಾರ್ಥಗಳಲ್ಲಿ ಸಿಕ್ಕತಕ್ಕ ಉತ್ಸಾಹ ಶಕ್ತಿಯ ಯೋಗ್ಯ ಉಪಯೋಗ ಮಾಡಿಕೊಂಡು ಅದರಿಂದಲೆ ಸಂತುಷ್ಟರಾಗಿರಬೇಕು.

ರೋಗಪರಿಸ್ಥಿತಿಯನ್ನನುಸರಿಸಿ ಔಷಧಗಳನ್ನು ಹೇಳಲಾಗುತ್ತದೆ. ಶರೀರದ ಮೇಲೆ ಹೆಚ್ಚಿನ ಭಾರವನ್ನು ಹಾಕುವದರಿಂದ ಉತ್ತೇಜಕ ಪದಾರ್ಥಗಳು ಅಪಾಯಕರವಾಗಿವೆ. ಆದುದರಿಂದ ಮುಖ್ಯ ಆಹಾರ ಪದಾರ್ಥ ಔಷಧ ಮತ್ತು ಉತ್ತೇಜಕಔಷಧಗಳಿಗೆ ತಕ್ಕುದಾದ ಸ್ಥಾನವಿದೆ ಒಂದರ ಬದಲು ಮತ್ತೊಂದನ್ನು ಪಯೋಗಿಸುವದು ಸಾಧ್ಯವಿಲ್ಲ. ಸಾಮಾನ್ಯ ಮಾನವನಿಗೆ ಆಹಾರ ರೋಗಿಗೆ ಔಷಧ ಮತ್ತು ಹೆಚ್ಚು ವಿಲಾಸಿಗಳಿಗೆ ಉತ್ತೇಜಕ ಪದಾರ್ಥಗಳನ್ನು ಕೊಡಬೇಕಾಗುತ್ತದೆ.

ಅದೇ ರೀತಿಯಾಗಿ ಸಸ್ಯ ಜೀವನದಲ್ಲಿಯೂ ಮೂರು ಮೆಟ್ಟಲುಗಳಿವೆ. ಈ ಸಸ್ಯಗಳಿಗೂ ಮನುಷ್ಯನಂತೆ ಆಹಾರ ಬೇಕಾಗುತ್ತದೆ. ಅವು ಗಾಳಿಯಿಂದ ಮತ್ತು ನೀರಿನ ಸಹಾಯದಿಂದ ಭೂಮಿಯಲ್ಲಿಯ ಆಹಾರವನ್ನು ದೊರಕಿಸುತ್ತವೆ ಯಾವದೊಂದು ಸಸ್ಯಕ್ಕೆ ಅವಶ್ಯವಾದ ವಿಶಿಷ್ಟ ಪದಾರ್ಥದ ಕೊರತೆಯಿದ್ದರೆ ಯೋಗ್ಯ ನಿದಾನ ಮತ್ತು ಚಿಕಿತ್ಸೆಯಿಂದ ಅದನ್ನು ಹೋಗಲಾಡಿಸಬಹುದು. ಅದೇ ರೀತಿಯಾಗಿ ವೃಕ್ಷಗಳಿಗೂ ಮನುಷ್ಯನಂತೆ ಉತ್ತೇಜಕ ಪದಾರ್ಥಗಳನ್ನು ಕೊಡಬಹುದು. ಆದರೆ ಅದು ಅಸ್ವಾಭಾವಿಕವಾದದು ನಿಸರ್ಗದಲ್ಲಿಯೆ ಸಸ್ಯ ಜೀವನಕ್ಕೆ ಬೇಕಾದ ಲೋಹ ಪದಾರ್ಥಗಳು ಮಣ್ಣಿನಲ್ಲಿಯೇ ಬೇರೆ ಬೇರೆ ರೂಪದಿಂದ ಸಿಕ್ಕುತ್ತವೆ. ವೃಕ್ಷಗಳಿಗೆ ಅವಶ್ಯವಾಗುವಂತೆ ಈ ಆಹಾರ ಸತ್ವಗಳನ್ನೆಲ್ಲ ಜೀವಾಣುಗಳು ಒದಗಿಸುತ್ತವೆ. ಸಾಮಾನ್ಯವಾಗಿ ಪ್ರಾಣಿಗಳು ವನಸ್ಪತಿಗಳಿಂದ ಆಹಾರ ಪದಾರ್ಥಗಳನ್ನು ಪಡೆಯುತ್ತದೆ. ಮತ್ತು ತಮ್ಮ ಉತ್ಸಾಹ ಶಕ್ತಿ ಮತ್ತು ಬೆಳವಣಿಗೆಗೆ ಅವಶ್ಯವಾದುದಷ್ಟನ್ನು ಸ್ವೀಕರಿಸಿ ಉಳಿದುದನ್ನು ತಿರುಗಿ ಭೂಮಿಗೆ ಕೊಟ್ಟು ಬಿಡುತ್ತವೆ. ಭೂಮಿಯಲ್ಲಿಯ ಸೂಕ್ಷ್ಮ ಜಂತುಗಳು ಇಂಥ ಪದಾರ್ಥಗಳನ್ನೆಲ್ಲ ಸಸ್ಯಗಳಿಗೆ ಒದಗಿಸುತ್ತವೆ ಮತ್ತು ನಿಸರ್ಗದಲ್ಲಿಯು ಈ ಚಕ್ರ ಹಾಗೆಯೆ ತಿರುಗುತ್ತದೆ. ಆಯಾ ವಿಶಿಷ್ಟ ಪರಿಸ್ಥಿತಿಗನುಸಾರವಾಗಿಯೆ ಮನುಷ್ಯ ಇದರಲ್ಲಿ ಕೈಹಾಕಬಲ್ಲನು.

ಎಲ್ಲ ಸಸ್ಯಗಳ ನೈಸರ್ಗಿಕ ಮುಖ್ಯ ಆಹಾರ ಪದಾರ್ಥಗಳೆಂದರೆ ಹಿತ್ತಲದಲ್ಲಿಯ ಗೊಬ್ಬರ ಮತ್ತು ಉಳಿದ ನೈಸರ್ಗಿಕ ಪದಾರ್ಥ. 'ಆಕ್ಸಿನ್ಸ್' ಎಂದು ಕರೆಸಿಕೊಳ್ಳುವ ಕೆಲ ಪದಾರ್ಥಗಳು ಇಂಥ ಗೊಬ್ಬರಗಳಲ್ಲಿರುತ್ತವೆ; ಆಹಾರ ಸತ್ವಗಳು ಮಾನವನ ಆಹಾರದಲ್ಲಿ ರಾಸಾಯನಿಕ ಪದ್ಧತಿಗೆ ಸಹಾಯಕವಾಗುವಂತೆ ಇವು ಸಸ್ಯಗಳಿಗೆ ಆಹಾರವನ್ನು ಹೆಚ್ಚು ಚೆನ್ನಾಗಿ ಅರಗಿಸಿಕೊಳ್ಳಲು ಸಹಾಯಕವಾಗುತ್ತವೆ. ಮಾನವ ಶರೀರಕ್ಕೆ ಆಹಾರ ಸತ್ವಗಳು ಅವಶ್ಯವಾಗಿರುವಂತೆ ಈ 'ಆಕ್ಸಿನ್ಸ್'ಗಳು ಸಸ್ಯ ಜೀವನಕ್ಕೆ ಅವಶ್ಯಕವಾಗಿವೆ. ಹಿತ್ತಲಿನಲ್ಲಿಯ ಗೊಬ್ಬರ ಮತ್ತು ಉಳಿದ ನೈಸರ್ಗಿಕ ಪದಾರ್ಥಗಳಲ್ಲಿ ಈ 'ಆಕ್ಸಿನ್ಸ್'ಗಳು ಹೆಚ್ಚಾಗಿ ಇರುತ್ತವೆ.

ನೆರೆಯಿಂದ ಮತ್ತು ಕೆಲ ಲೋಹ ಪದಾರ್ಥಗಳು ಬಳಿದು ಹೋಗುವುದರಿಂದ ಅವುಗಳ ಕೊರತೆ ಭೂಮಿಗೆ ಆಗುತ್ತದೆ. ಆದುದರಿಂದ ಕೆಲವೊಂದು ರಾಸಾಯನಿಕ ದ್ರವ್ಯಗಳ ಉಪಯೋಗ ಮಾಡಿ ಆ ಕೊರತೆಯನ್ನು ಹೋಗಲಾಡಿಸಬೇಕಾಗುತ್ತದೆ. ಮನುಷ್ಯನ ಶರೀರಕ್ಕೆ ಔಷಧಗಳನ್ನೊದವಿಸುವಂತೆ ಈ ರಾಸಾಯನಿಕ ದ್ರವ್ಯಗಳನ್ನು ಭೂಮಿಗೆ ಒದಗಿಸಬೇಕಾಗುತ್ತದೆ. ಆಯಾ ರೋಗಿಯ ಪ್ರಕೃತಿಮಾನಕ್ಕನುಸಾರವಾಗಿ ಚೆನ್ನಾಗಿ ಚಿಕಿತ್ಸೆಮಾಡಿದ ನಂತರ ವೈದ್ಯನು ಔಷಧೋಪಚಾರ ಮಾಡುವಂತೆ ಆಯಾ ಭೂಮಿಯ ಗುಣ ಪರೀಕ್ಷೆ ಮಾಡಿ ಆ ಭೂಮಿಗಳಲ್ಲಿ ಬೆಳೆಸತಕ್ಕ ಸಸ್ಯಜೀವನಕ್ಕೆ ಅವಶ್ಯಕವಾದ ಪದಾರ್ಥಗಳಾವುವೆಂದು ಮುಂತಾದ್ದನ್ನು ಗೊತ್ತುಪಡಿಸಿದ ಬಳಿಕ ರಾಸಾಯನಿಕ ಗೊಬ್ಬರನೊದಲಾದವನ್ನು ಆಯಾ ಭೂಮಿಗೆ ಒದಗಿಸುವ ಮಾರ್ಗವನ್ನನುಸರಿಸಬೇಕಾಗುತ್ತದೆ. ಭೂಶಾಸ್ತ್ರ ಪಂಡಿತನ ಅಭಿಪ್ರಾಯವನ್ನು ತೆಗೆದುಕೊಳ್ಳದೆ ಮನಸಿಗೆ ಬಂದಂತೆ ರಾಸಾಯನಿಕ ಗೊಬ್ಬರ ಮೊದಲಾದ್ದನ್ನು ಉಪಯೋಗಿಸುವದೆಂದರೆ ಔಷಧಗಳ ಜ್ಞಾನವಿಲ್ಲದವನು ರೋಗಿಗೆ ಅವುಗಳನ್ನು ಕೊಟ್ಟಂತೆಯೆ ಮೂರ್ಖತನದ್ದಾಗುವದು. ಅದರ ಪರಿಣಾಮಗಳು ಅಷ್ಟೇ ಘಾತಕವಾಗಬಲ್ಲವು. ಆದುದರಿಂದ ರಾಸಾಯನಿಕ ಗೊಬ್ಬರ ಸಸ್ಯಗಳಿಗೆ ಆಹಾರ ಪದಾರ್ಥಗಳಾಗಿರದೆ ಭೂಮಿಗೆ ಔಷಧಗಳಿದ್ದಂತೆ. ಮಾರ್ಫಿಯಾ ಮೊದಲಾದ ಉತ್ತೇಜಕ ಔಷಧಗಳು ಮಾನವ ಶರೀರವನ್ನು ಅವಶ್ಯಕತೆಗಿಂತ ಹೆಚ್ಚು ಉತ್ತೇಜಿತ ಮಾಡುವದು ಶಕ್ಯವಿದ್ದಂತೆ ಸಸ್ಯಗಳ ಬೆಳವಣಿಗೆ ಮತ್ತು ಉತ್ಪಾದನೆಯನ್ನು ಔಷಧ ಮೊದಲಾದವುಗಳ ಉಪಯೋಗದಿಂದ ಅನಾರೋಗ್ಯಕರ ರೀತಿಯಲ್ಲಿ ಹೆಚ್ಚಿಸಬಹುದಾಗಿದೆ. ರಾಸಾಯನಿಕ ಗೊಬ್ಬರ ಈ ಬಗೆಯ ಪರಿಣಾಮವನ್ನುಂಟು ಮಾಡಬಲ್ಲದು ಆದರೆ ಅದು ಅನಾರೋಗ್ಯಕರ ಸಂಕುಚಿತ ದೃಷ್ಟಿಯು ಮತ್ತು ಅಸ್ವಾಭಾವಿಕವಾದ ಬಗೆಯು.

ಮಾನವ ಶರೀರಕ್ಕೆ ಅವಶ್ಯಕವಾದ ಸಾಮಾನ್ಯ ಬೇಡಿಕೆಗಳನ್ನು ನಮ್ಮ ಒಕ್ಕಲತನ ಆಹಾರ ಪದಾರ್ಥಗಳ ಉತ್ಪಾದನೆ ಒದಗಿಸುವದಾದರೆ ನಾವು ಯಾವ ಸಸ್ಯಗಳಿಂದ ಅವನ್ನು ಪಡೆಯುತ್ತವೆಯೊ ಅವು ನಿರೋಗಿ, ಸಾಮಾನ್ಯ ಮತ್ತು ಸುಪುಷ್ಟವಾದವುಗಳಿರಬೇಕಾದುದು ಅವಶ್ಯ. ಕೃತ್ರಿಮ ಉತ್ತೇಜಕಗಳು ಇಲ್ಲವೆ ಕೃತ್ರಿಮ ಆಹಾರ ಪದಾರ್ಥಗಳಿಂದ ಸ್ವಾಭಾವಿಕವಾಗಿ ನಮ್ಮ ಆಹಾರ ಪದಾರ್ಥಗಳ ಮೇಲೆ ದುಷ್ಪರಿಣಾಮವುಂಟಾಗುವದು. ನಮ್ಮ ದೇಶದಲ್ಲಿ ಹೆಚ್ಚಾಗಿ ಸಸ್ಯ ಜೀವನವನ್ನು ನಾವು ಅವಲಂಬಿಸುವದರಿಂದ ಅವುಗಳ ದುಷ್ಪರಿಣಾಮ ಬಾಧಕವಾಗುತ್ತದೆ. ಆದುದರಿಂದ ಈ ಸಸ್ಯಗಳಿಗೆ ಒದಗಿಸುವ ಆಹಾರದ ಬಗ್ಗೆ ಮತ್ತು ಅವುಗಳಿಗೆ ಕೊಡುತ್ತಿರುವ ಔಷಧ ಮತ್ತು ಉಳಿದ ಪದಾರ್ಥಗಳ ಬಗ್ಗೆ ಹೆಚ್ಚು ದಕ್ಷರಾಗಿರಬೇಕಾದುದು ಅವಶ್ಯವಾಗಿದೆ. ಯಾವದೇ ಕಾಲಕ್ಕೆ ಅನವಶ್ಯಕ ಪ್ರಮಾಣದಲ್ಲಿ ಅವುಗಳಿಗೆ ಆಹಾರ ಉತ್ತೇಜಕ ಪದಾರ್ಥ ಮೊದಲಾದವುಗಳನ್ನು ಕೊಟ್ಟಿದ್ದಾದರೆ ಅದರಿಂದ ಮಾನವ ಶರೀರದ ಆರೋಗ್ಯದ ಪರಿಸ್ಥಿತಿಯ ಮೇಲೆ ಕೊನೆಯಲ್ಲಿ ದುಷ್ಪರಿಣಾಮವುಂಟಾಗದಿರದು.

ನ್ಯೂಜಿಲಂಡಿನಲ್ಲಿ ರಾಸಾಯನಿಕಗೊಬ್ಬರವನ್ನೆ ಭೂಮಿಗೆ ಹಾಕಿ ಹೆಚ್ಚಾಗಿ ಆಹಾರ ಪದಾರ್ಥಗಳನ್ನು ಉತ್ಪಾದಿಸಲಾಗುತ್ತದೆ. ಅದರಿಂದ ನ್ಯೂಜಿಲಂಡ ಜನರು ಚಳಿ, ಇನಫ್ಲುಯೆಂಜಾ, ಸೆಪ್ಟಿಕ್ ಟಾನ್ಸಿಲ್ಸ ಮತ್ತು ಹಲ್ಲು ಹುಳುಕಾಗುವದು ಮೊದಲಾದ ರೋಗಗಳಿಗೆ ಬಲಿಯಾಗುವರು. ಆದುದರಿಂದ ನ್ಯೂಜಿಲಂಡಿನಲ್ಲಿಯ ಫಿಜಿಕಲ್ ಮೆಂಟಲ್ ವೆಲ್‌ಫೇರ ಸೊಸಾಯಿಟಿಯ ಡಾ. ಚಾಪಮನ್‌ರು ಮೌಂಟ ಅಲ್ಬರ್ಟ ಗ್ರಾಮರ ಸ್ಕೂಲ ಹಾಸ್ಟೆಲಿನಲ್ಲಿ ಕೆಲ ಪ್ರಯೋಗಗಳನ್ನು ನಡೆಸಿದರು. ೬೦ಕ್ಕಿಂತ ಹೆಚ್ಚು ವಿದ್ಯಾರ್ಥಿಗಳು ಶಿಕ್ಷಕರು ಮತ್ತು ಶಿಬ್ಬಂದಿಗಳಿಗೆ ಪ್ರಯೋಗಾತ್ಮಕ ಆಹಾರ ಪದಾರ್ಥಗಳನ್ನು ಕೊಡಹತ್ತಿದರು. ಕೃತ್ರಿಮ ರಾಸಾಯನಿಕ ದ್ರವ್ಯಗಳ ಸಹಾಯದಿಂದ ಬೆಳೆದ ಹಣ್ಣು ಹಂಪಲು ಕಾಯಿಪಲ್ಲೆಗಳ ಬದಲು ಅವರಿಗೆ ಹಿತ್ತಲ ಗೊಬ್ಬರಿನ ಸಹಾಯದಿಂದ ಬೆಳೆದ ಹಣ್ಣು ಹಂಪಲು ಮೊದಲಾದ್ದನ್ನು ಕೊಡಹತ್ತಿದರು. ಈ ಸಂಬಂಧದಲ್ಲಿ ಅವರು ಹೀಗೆ ವರದಿ ಮಾಡುತ್ತಾರೆ. ಇದರಿಂದ ಸ್ವಾಭಾವಿಕವಾದ ಬೆಳವಣಿಗೆಯಾಗಿ ಸಾಮಾನ್ಯ ರೋಗಗಳಿಂದ ಜನ ಮುಕ್ತರಾದುದು ಕಂಡುಬಂತು ಮತ್ತು ಅವರ ಹಲ್ಲಿನ ಪರಿಸ್ಥಿತಿಯೂ ಸುಧಾರಿಸಿತು." ಕಳೆದ ಯುದ್ಧದಲ್ಲಿ ತರುಣರನ್ನು ಸೈನ್ಯದಲ್ಲಿ ತುಂಬಿಕೊಳ್ಳುವ ಕಾಲಕ್ಕೆ ನ್ಯೂಜಿಲಂಡಿನಲ್ಲಿಯ ನೂರಕ್ಕೆ ೪೦ ರಷ್ಟು ಜನ ತರುಣರ ಹಲ್ಲು ಚೆನ್ನಾಗಿಲ್ಲದ್ದರಿಂದ ಸೈನಿಕರೆಂದು ತೆಗೆದುಕೊಳ್ಳಲು ಅಯೋಗ್ಯರೆಂದು ಪರಿಗಣಿಸಲಾಯಿತೆಂದು ಉಲ್ಲೇಖಿಸಬಹುದಾಗಿದೆ. ಹಿಂದುಸ್ತಾನದಲ್ಲಿಯ ಜನರ ಆರೋಗ್ಯ ಯಾವ ಸ್ಥಿತಿಯಲ್ಲಿರಬೇಕೋ ಆಸ್ಥಿತಿಯಲ್ಲಿ ಇಲ್ಲವಾದರೆ ಈ ರಾಸಾಯನಿಕ ಗೊಬ್ಬರದ ಬಗ್ಗೆ ನಾವು ಹೆಚ್ಚು ದಕ್ಷತೆ ವಹಿಸಬೇಕು. ನಮ್ಮ ಆಹಾರ ಪದಾರ್ಥಗಳ ಕೊರತೆ ದೃಷ್ಟಿಯಿಂದಲೆ ನಾವು ಹೀಗೆ ಹೇಳಬಲ್ಲೆವು.

ಭೂಮಿಯ ಅವಶ್ಯಕತೆಯ ದೃಷ್ಟಿಯಿಂದ ವಿಚಾರಿಸಿದರೆ ರಾಸಾಯನಿಕ ಗೊಬ್ಬರದಿಂದ ಭೂಮಿಯಲ್ಲಿ ಹುಳಿಯು ಹೆಚ್ಚುತ್ತದೆ. ಬಂಗಾಲ ಬಿಹಾರಗಳಲ್ಲಿಯ ಕೆಲ ಭಾಗಗಳು ಇದರಿಂದ ಬೇಯುತಿವೆ. ರಾಸಾಯನಿಕ ಗೊಬ್ಬರ ಪರಿಣಾಮಕರವಾಗಬೇಕಾದರೆ ಹೆಚ್ಚು ಆಳಭೂಮಿಯಲ್ಲಿ ಅದನ್ನು ಹಾಕಬೇಕಲ್ಲದೆ ಮೇಲೆಯೆ ಹಾಕಬಾರದು. ಗೊಬ್ಬರವನ್ನು ಭೂಮಿಯಲ್ಲಿ ಸ್ವಲ್ಪ ಆಳ ಹಾಕಬೇಕಾದರೆ ಹೆಚ್ಚು ಊಳುವದು ಅವಶ್ಯ. ಅಲ್ಲದೆ ಹೆಚ್ಚು ನೀರಾವರಿಯ ಅವಶ್ಯಕತೆಯೂ ಇದೆ. ನಮ್ಮ ದೇಶದಲ್ಲಿ ಬಹ್ವಂಶ ಭೂಮಿಯು ಕೇವಲ ಮಳೆಯನ್ನೇ ಅವಲಂಬಿಸುವದರಿಂದ ಆಳವಾಗಿ ಊಳುವದು ಮತ್ತು ಹೆಚ್ಚು ಹಣ ವೆಚ್ಚಮಾಡಿ ಗೊಬ್ಬರಹಾಕುವದು ಕೇವಲ ಜೂಜಾಟದಂತೆಯೇ. ಏಕೆಂದರೆ ಮಳೆ ಚೆನ್ನಾಗಿ ಬೀಳಲಿಲ್ಲೆಂದು ಕೊನೆಗೆ ಕೊರಗಬೇಕಾಗುವದು. ನಮ್ಮ ಒಕ್ಕಲಿಗರು ಧನವಂತರಾಗಿರುವದಿಲ್ಲ ಮತ್ತು ಈ ಬಗೆಯ ಪ್ರಯೋಗಮಾಡಿ ಕೊಡುವ ಗಂಡಾಂತರವನ್ನೆದುರಿಸುವಷ್ಟು ಸಮರ್ಥರಾಗಿಲ್ಲ.

ಮೊದಲೆ ನಾವು ತೋರಿಸಿಕೊಟ್ಟಂತೆ ರಾಸಾಯನಿಕ ಗೊಬ್ಬರದ ಉಪಯೋಗ ಮಾಡುವ ಮೊದಲು ಭೂಮಿಯ ಗುಣ ಪರಿಸ್ಥಿತಿ ಮೊದಲಾದ್ದನ್ನು ಒಳ್ಳೆ ದಕ್ಷತೆಯಿಂದ ತಿಳಿದುಕೊಳ್ಳುವದು ಅವಶ್ಯವಾಗಿದೆ. ಇದಕ್ಕಾಗಿ ಒಳ್ಳೆ ತರಬೇತಿ ಹೊಂದಿದ ಒಕ್ಕಲತನರಸಾಯನಶಾಸ್ತ್ರಜ್ಞರ ತಂಡವೊಂದು ಅವಶ್ಯ. ಈ ತಜ್ಞರು ಭೂಮಿಯ ಡಾಕ್ಟರರೆಂದು ಕೆಲಸ ಮಾಡಬಲ್ಲರು. ಸಾಗುವಳಿ ಮಾಡುವ ಪ್ರತಿಯೊಂದು ಭೂಮಿಗಾಗಿ ಇಂಥ ತಜ್ಞರು ಸಿಕ್ಕುವ ವರೆಗೆ ಒಕ್ಕಲಿಗರಿಗೆ ರಾಸಾಯನಿಕ ಗೊಬ್ಬರವನ್ನು ಒದಗಿಸುವದೆಂದರೆ ಮೂರ್ಖತನವೇ. ಅವುಗಳ ಉಪಯೋಗದ ಬಗ್ಗೆ ಯಾವದೇ ನಿಯಂತ್ರಣವಿಲ್ಲದೆ ಅಫು ಮಾರ್ಫಿಯಾ ಮೊದಲಾದ ವಿಷಾರಿ ಔಷಧಗಳನ್ನು ಅಜ್ಞ ರೋಗಿಗಳ ಕಡೆಗೆ ಕೊಟ್ಟಂತೆಯೆ, ಇದಿರುವದು. ಆದುದರಿಂದ ರಾಸಾಯನಿಕ ಗೊಬ್ಬರದ ಉಪಯೋಗವನ್ನು ಪ್ರಾರಂಭಿಸಬೇಕೆಂದು ನಮ್ಮ ಇಚ್ಛೆ ಇದ್ದರೆ ಇದಕ್ಕೂ ಮೊದಲು ಒಕ್ಕಲತನ ರಸಾಯನ ಶಾಸ್ತ್ರಜ್ಞರನ್ನು ಹೆಚ್ಚು ಪ್ರಮಾಣದಲ್ಲಿ ಒದಗಿಸುವದು ಅವಶ್ಯವಾಗಿದೆ. ನಮ್ಮ ದೇಶದಲ್ಲಿ ಮನುಷ್ಯರಿಗಾಗಿಯೇ ಸಾಕಷ್ಟು ವೈದ್ಯರು ಸಿಕ್ಕುವುದಿಲ್ಲ. ಈ ಪರಿಸ್ಥಿತಿಯಲ್ಲಿ ಭೂ ವೈದ್ಯರನ್ನು ತರುವುದೆಲ್ಲಿಂದ?

ಈಯೆಲ್ಲ ಸಂಗತಿಗಳು ನಮ್ಮ ಮುಂದಿರುವಾಗ ನಮ್ಮ ಕೇಂದ್ರ ಸರಕಾರದವರು ತಪ್ಪು ಸಲಹೆಗೆ ಬಲಿಬಿದ್ದು ರಾಸಾಯನಿಕ ಗೊಬ್ಬರದ ಬೆಳವಣಿಗೆ ಪ್ರಸಾರ ಕಾರ್ಯವನ್ನು ಭರದಿಂದ ನಡೆಸುತಿರುವದನ್ನು ನೋಡಿ ವಿಷಾದಿಸಬೇಕಾಗಿದೆ. ಬಿಹಾರದಲ್ಲಿ ಸಿಂಧರಿ ಎಂಬಲ್ಲಿ ರಾಸಾಯನಿಕ ಗೊಬ್ಬರದ ಕಾರಖಾನೆಗಳ ಯೋಜನೆಯೊಂದು ಮುಂದೆ ಬಂದಿದೆ. ಇದಕ್ಕಾಗಿ ೧೨ ಕೋಟಿ ರೂಪಾಯಿ ಪರದೇಶೀ ಯಂತ್ರ ಮತ್ತು ಯಂತ್ರೋಪಕರಣಗಳಿಗಾಗಿ ಮತ್ತು ಕಟ್ಟಡ ಮತ್ತು ಉಳಿದ ಅವಶ್ಯಕ ಪದಾರ್ಥಗಳಿಗಾಗಿ ಮತ್ತೆ ೧೧ ಕೋಟಿ ರೂಪಾಯಿಗಳು ವೆಚ್ಚಮಾಡಲಾಗುತ್ತದೆ. ಅವರಲ್ಲಿ ಸದ್ಬುದ್ಧಿಯುಂಟಾಗಿ ಈ ಆತ್ಮಘಾತಕ ಯೋಜನೆಗಳನ್ನು ಬಿಟ್ಟುಗೊಟ್ಟು ಹೆಚ್ಚು ನಿರೋಗಿಯಾದ ಪದ್ಧತಿಯಲ್ಲಿ ಸಂಶೋಧನೆಗಳು ನಡೆಯುವವೆಂದು ಹಾರೈಯಿಸಲಾಗಿದೆ. ಇಂದು ಹಾಳಾಗುತಿರುವ ನೈಸರ್ಗಿಕ ವಸ್ತುಗಳೆ ಯೋಗ್ಯ ಗೊಬ್ಬರವೆಂದು ನಮ್ಮ ಹೊಲಗಳಿಗೆ ಸಿಕ್ಕುವಂತೆ ಈ ಹೊಸ ಸಂಶೋಧನೆ ಯೋಜಿಸಲಿ.

ಇಂಥ ಮಾರ್ಗದಿಂದಲೆ ನಮಗೆ ಆರೋಗ್ಯಕರ ಆಹಾರ ಸಿಕ್ಕುತ್ತವೆ. ಜನತೆಗೆ ಆಗುತಿರುವ ಅಪಾಯಗಳನ್ನು ಲಕ್ಷಿಸದೆ ತಮ್ಮ ಜೀವನದ ಮುಖ್ಯ ಧ್ಯೇಯ ಹಣವನ್ನು ಸಂಪಾದಿಸುವದೇ ಆಗಿದೆಂಬದು ಭಾವಿಸುವ ಧರ್ಭೀರುವಲ್ಲದ ಜನರ ಶೋಷಣೆಯಿಂದ ನಮ್ಮ ರಕ್ಷಣೆ ಇಂಥ ಮಾರ್ಗದಿಂದಲೆ ಆಗಬಲ್ಲುದು.

# ಅಂತರ್ರಾಷ್ಟ್ರೀಯ

## ಬ್ರಿಟನ್ನಿನಲ್ಲಿ ಸೂರ್ಯೋದಯ

ಮೂರು ವಾರಗಳ ಅಂಧಕಾರ ಯುಗದ ನಂತರ ಇಂಗ್ಲಂಡಿನಲ್ಲಿ ಮೊನ್ನೆ ತಾ ೨೩ಕ್ಕೆ ಸೂರ್ಯದರ್ಶನವಾಯಿತು ಬಿಸಿಲೇರಿ ಮಧ್ಯಾಹ್ನವಾದಾಗ ಶೂನ್ಯಾಂಶಕ್ಕಿಂತ ಹವೆಯ ಉಷ್ಣತೆ ಮೇಲೇರತೊಡಗಿತು. ರಾತ್ರಿ ಮತ್ತೆ ಚಳಿ ಏಪರೀತವಾಗಿದ್ದರೂ ಮರುದಿನ ಉಷ್ಣಮಾಪಕದಲ್ಲಿ ಹಿಮಬಿಂದುವಿಗಿಂತ ೧೦ ಅಂಶ ಮೇಲೇರಿತು. ಮಂಜು ತುಸು ಕರಗಿತು ಕೆಲವಡೆ ವಿದ್ಯುಚ್ಛಕ್ತಿಯನ್ನುಪಯೋಗಿಸಲು ಅಪ್ಪಣೆ ದೊರೆತಿದ್ದರೂ ಅನ್ನು ಹಲವೆಡೆ ಪರಿಸ್ಥಿತಿಯನ್ನು ಸುಧಾರಿಸದಿದ್ದುದರಿಂದ ನಿಯಂತ್ರಣ ಹಾಗೆಯೆ ಇದೆ. ಇದಲ್ಲದೆ ಗ್ಯಾಸಿನ ಕೊರತೆಯುಂಟಾಗಿ ಅದರ ಮೇಲೂ ನಿಯಂತ್ರಣ ಹೊರಬೇಕಾದೀತೆಂಬ ಹೆದರಿಕೆಯುದ್ಭವಿಸಿದೆ. ಅಯರ್ಲಂಡಿಗೂ ಈ ಬಾರಿ ಚಳಿಯ ಕಾಟ ಹಬ್ಬಿ ಇಂಗ್ಲಂಡಿನಂತೆ ಅಲ್ಲಿಯೂ ನಿರ್ವಿದ್ಯುತ್ ದಿನಗಳು ಬರಬಹುದೆಂದು ಭಯಪಡಲಾಗಿದೆ.

## ಪ್ಯಾಲಿಸ್ತಾನ—ಮುಂದೇನು?

ಜೀವನದಲ್ಲೊಮ್ಮೆ ಬ್ರಿಟಿಶ ಸರಕಾರ ತಾನು ಕೈಕೊಂಡ ಕೆಲಸ ತನ್ನಿಂದಾಗುವದಿಲ್ಲೆಂದು ಒಪ್ಪಿಕೊಂಡಿತು. ಪ್ಯಾಲಿಸ್ತಾನದ ಅರಬ—ಯಹೂದ್ಯ ಸಮಸ್ಯೆಯನ್ನು ಯುಕ್ತ ರಾಷ್ಟ್ರಗಳಿಗೊಪ್ಪಿಸುವ ನಿರ್ಣಯವನ್ನು ಪಾರ್ಲಿಮೆಂಟಿನ ಮುಂದಿರಿಸುತ್ತ ವಿದೇಶ ಮಂತ್ರಿ ಬೆವಿನ್ನರು ಪ್ಯಾಲಿಸ್ತಾನದ ಆದಿಷ್ಟ ಆಡಳಿತೆ ವಿಫಲವಾಗಿದೆಯೆಂದು ಅಂಗೀಕರಿಸಿದರು. ರಾಷ್ಟ್ರ ಸಂಘ ಮೊದಲನೆ ಮಹಾಯುದ್ಧದ ನಂತರ ಬ್ರಿಟನ್ನಿಗೆ ಪ್ಯಾಲಿಸ್ತಾನದ ಆದಿಷ್ಟಾಧಿಕಾರವನ್ನು ಕೊಟ್ಟಾಗ ಆಗ ಪ್ಯಾಲಿಸ್ತಾನದಲ್ಲಿದ್ದ ಅರಬ ಹಿತಕ್ಕೆ ಧಕ್ಕೆಯಾಗದಂತೆ ಅದನ್ನು ಯಹೂದ್ಯರ ರಾಷ್ಟ್ರೀಯ ಮಾತೃಭೂಮಿಯಾಗಿ ಮಾರ್ಪಡಿಸುವ ಹೊಣೆಯನ್ನು ಹೊರಿಸಲಾಗಿತ್ತು. ಈ ಕಾರ್ಯದ ಅಸಾಧ್ಯತೆ ಇದೀಗ ಬ್ರಿಟಿಶ ಸರಕಾರದ ಮನವರಿಕೆಗೆ ಬಂದಂತಾಗಿದೆ. ಬೆವಿನ್ನರು ಕಳೆದ ವಾರ ಪಾರ್ಲಮೆಂಟಿನ ಮುಂದೆ ಪ್ಯಾಲಿಸ್ತಾನದ ಸಮಸ್ಯೆಯ ಸ್ವರೂಪವನ್ನು ಹೀಗೆ ಸಂಗ್ರಹಿಸಿ ಪಾರ್ಲಮೆಂಟಿನಲ್ಲಿ ಚರ್ಚೆಯನ್ನು ಪ್ರಾರಂಭಿಸಿದರು. ಅದರಲ್ಲಿ ಮೂರು ಮಾರ್ಗಗಳು ಮಾತ್ರ ಸಾಧ್ಯವೆಂದು ಅವರೊಪ್ಪಿದರು. (೧) ಪ್ಯಾಲಿಸ್ತಾನವನ್ನು ಪೂರ್ತಿ ಯಹೂದಿ ರಾಷ್ಟ್ರವಾಗಿ ಮಾಡುವದು. ಇದು ಯಹೂದ್ಯರ ಬೇಡಿಕೆ. (೨) ಅದನ್ನು ಅರಬ ರಾಷ್ಟ್ರವಾಗಿಯೆ ಉಳಿಸಿ ಯಹೂದ್ಯರಿಗೆ ತಕ್ಕ ಸಂರಕ್ಷಣ ಕೊಡುವದು. ಇದು ಅರಬರ ಬೇಡಿಕೆ. (೩) ಅಥವಾ ಎರಡೂ ಸಮಾಜಗಳ ಸಂಬಂಧಗಳನ್ನು ತೂಕವಾಗಿರಿಸಿ ಒಂದು ಪ್ಯಾಲಿಸ್ತಾನ ಸರಕಾರವನ್ನು ಸ್ಥಾಪಿಸುವದು. ಈ ಮೂರರಲ್ಲೊಂದಕ್ಕೂ ಎರಡೂ ಸಮಾಜದ ಒಪ್ಪಿಗೆಯಿಲ್ಲ. ಹೀಗಿರುತ್ತ ನಮಗೆ ಸರಿತೋರಿದ ಹಾದಿಯನ್ನನುಸರಿಸಿ ಒತ್ತಾಯ ಹೇರಲು ನಮಗೆ ಆದಿಷ್ಟ ಅಧಿಕಾರ ಪತ್ರದಲ್ಲಿ ಅಧಿಕಾರ ಕೊಡಲ್ಪಟ್ಟಿಲ್ಲ. ಮೊದಲನೆಯದನ್ನು ಅರಬರು ಸರ್ವಥಾ ವಿರೋಧಿಸುವರು. ಈಗಿಂದೀಗ ಪ್ಯಾಲಿಸ್ತಾನಕ್ಕೆ ಸ್ವಾತಂತ್ರ್ಯ ಕೊಟ್ಟು ಅಲ್ಲಿ ಶಾಶ್ವತ ಅರಬ ಬಹುಮತವುಳ್ಳ ಅಖಂಡ ಸರಕಾರ ಸ್ಥಾಪಿಸಬೇಕೆಂದು ಅವರು ಸಾಧಿಸುತ್ತಾರೆ ಎರಡನೆಯದನ್ನು ಯಹೂದ್ಯರು ಜೀವದ ಹಂಗು ತೊರೆದು ವಿರೋಧಿಸುವರು. ಪ್ಯಾಲಿಸ್ತಾನದಲ್ಲಿ ಯಹೂದ್ಯರ ಬಹುಮತವಾಗುವ ವರೆಗೆ ಅವರಿಗೆ ಅನಿರ್ಬಂಧವಾಗಿ ವಲಸೆಬರುವ ಅಧಿಕಾರಕೊಟ್ಟು ಆಮೇಲೆ ಅಲ್ಲಿ ಶಾಶ್ವತ ಯಹೂದ್ಯ ಬಹುಮತದ ಸರಕಾರ ಸ್ಥಾಪಿಸಬೇಕೆಂದು ಅವರ ಹಟ ಈಗಾಗಲೆ ಯಹೂದ್ಯರ ಸಂಖ್ಯೆ ಬೆಳೆದು ೬ ಲಕ್ಷಕ್ಕೆ ಬಂದಿದೆ. ಅರಬರ ಸಂಖ್ಯೆಯ ಅರ್ಧದಷ್ಟಾಗುವದಿದು. ಇವೆರಡರ ಮಧ್ಯಮಾರ್ಗವೆಂದು ಪ್ರಾಂತಿಕ ಸ್ವಾಯತ್ತತೆಯ ತಳಹದಿಯಲ್ಲಿ ಬ್ರಿಟಿಶರ ಸೂಚಿಸಿದ ದಿಕ್ಕು ಇಬ್ಬರಿಗೂ ಒಪ್ಪಿಗೆಯಿಲ್ಲ. ಎರಡು ವರ್ಷಗಳ ವರೆಗೆ ತಿಂಗಳಿಗೆ ೪೦೦೦ ಯಹೂದ್ಯರು ವಲಸೆ ಹೋಗಬೇಕೆಂದೂ ಮುಂದಿನ ಮಾತು ಪರಿಸ್ಥಿತಿಯ ಮೇಲಿಂದ ನಿರ್ಣಯಿಸಲ್ಪಡಬೇಕೆಂದೂ ಅವರು ಸೂಚಿಸಿದರು. ಕಳೆದ ವರ್ಷ ಪ್ರಕಟವಾದ ಆಂಗ್ಲೊ-ಅಮೇರಿಕನ್ ಪ್ಯಾಲಿಸ್ತಾನ ವಿಚಾರಣಾಸಮಿತಿಯ ವರದಿಯಲ್ಲಿ ಈಗಿಂದೀಗ ೧ ಲಕ್ಷ ಯಹೂದ್ಯರಿಗೆ ಪ್ರವೇಶವೀಯಬೇಕೆಂದು ಸೂಚಿಸಲ್ಪಟ್ಟಿರುವಾಗ ಈ ಎರಡು ವರ್ಷದ ಯೋಜನೆಗೆ ಯಹೂದ್ಯರೇಕೆ ಒಪ್ಪುವರು? ಮಧ್ಯಪೂರ್ವದ ಶಾಂತಿ ಸುವ್ಯವಸ್ಥೆಗಳ ಮೇಲೆ ಬಹಳ ಪರಿಣಾಮ ಮಾಡಬಹುದಾದ ಈ ಪ್ರಶ್ನೆಯನ್ನು ಏಕಪಕ್ಷೀಯವಾಗಿ ನಿರ್ಣಯಿಸಲು ಎದೆ ಸಾಲದೆ ಬೆವಿನ್ನರು ಯುಕ್ತ ರಾಷ್ಟ್ರ ಸಂಘಕ್ಕೆ ಮೊರೆಹೋಗುವ ನಿರ್ಧಾರಕ್ಕೆ ಬಂದರು.

ಇತ್ತ ಪ್ಯಾಲಿಸ್ತಾನದಲ್ಲಿ ಕೊನೆಯ ಶಕ್ತಿ ಪರೀಕ್ಷೆಗೆ ಎರಡೂ ಪಕ್ಷಗಳು ಸಿದ್ಧವಾಗುತ್ತಿವೆ. ಯಹೂದ್ಯ ಕ್ರಾಂತಿಕಾರಿ ಪಕ್ಷವಂತೂ ಇಡಿ ಪ್ಯಾಲಿಸ್ತಾನವನ್ನು ಮಾತ್ರವಲ್ಲದೆ ಜಾರ್ಡನ್ ನದಿಯಿಂದಾಚೆಗಿರುವ ಟ್ರಾನ್ಸಜಾರ್ಡನನ್ನು ಕೂಡ ಆಕ್ರಮಿಸಿ ಯಹೂದ್ಯ ರಾಜ್ಯವನ್ನು ಕಟ್ಟುವದೇ ಯಹೂದ್ಯರ ಧ್ಯೇಯವೆಂದು ಸಾರಿಬಿಟ್ಟಿದೆ ಬಲವಂತರ ಬೆಂಬಲವುಳ್ಳ ಯಹೂದ್ಯರೆದುರು ತಾವು ಯುಕ್ತ ರಾಷ್ಟ್ರ ಸಂಘದಲ್ಲಿ ನ್ಯಾಯವನ್ನು ನಿರೀಕ್ಷಿಸುವದು ಸಾಧ್ಯವಿಲ್ಲೆಂದು ಬಲ್ಲ ಅರಬರು ತಾವೂ ತೋಳು ಮೇಲೇರಿಸುತ್ತಿದ್ದಾರೆ. ಪ್ಯಾಲಿಸ್ತಾನದ ಕಾಳಗಕ್ಕಾಗಿ ೨, ೨೦, ೦೦೦ ಪೌಂಡಿನ ಧನಸಂಗ್ರಹವನ್ನು ಅರಬ ರಾಷ್ಟ್ರಗಳಲ್ಲಿ ಅವರೀಗಲೆ ಆರಂಭಿಸಿರುವರು. ೧೯೩೬—೩೯ ರ ಪ್ಯಾಲಿಸ್ತಾನ ಅರಬ ಬಂಡಾಯದ ಗುಪ್ತ ನಾಯಕನಾಗಿದ್ದ ಫೌಜಿ ಬೆ. ಕವಾಕಜಿ ಈಗಾಗಲೆ ಯುರೋಪಿನಿಂದ ಇಜಿಪ್ತಿಗೆ ಬಂದು ಶಾಸನ ಬಾಹ್ಯ ಅರಬ ತರುಣ ಸಂಘಗಳನ್ನು ಸಂಘಟಿಸಲು ಉದ್ಯೋಗಿಸುತ್ತಿದ್ದಾನೆ.

## ಜರ್ಮನರ ಒಳಸಂಚು

ನಾಜೀ ಮನೋವೃತ್ತಿಯ ಜನರು ಜರ್ಮನಿಯಲ್ಲಿನ್ನೂ ಬದುಕಿದ್ದಾರೆ ಮಾತ್ರವಲ್ಲ ಒಳ್ಳೆ ಚೈತನ್ಯದಿಂದ ಕೆಲಸ ಮಾಡುತ್ತಿದ್ದಾರೆಂದು ಕಳೆದ ವಾರ ಅಮೇರಿಕನ್-ಬ್ರಿಟಿಶ ಗುಪ್ತಚಾರರು ಹರಡಿದ ಬಲೆಯಲ್ಲಿ ಅನೇಕ ಜರ್ಮನ್ ನಾಜಿಗಳು ಸಿಕ್ಕಿಬಿದ್ದುದರಿಂದ ಗೊತ್ತಾಗಿದೆಯೆಂದು ಹರ್ಫೋರ್ಡದಿಂದ ಸುದ್ದಿ ಬಂದಿದೆ ಯುರೋಪಿನ ರಾಷ್ಟ್ರಗಳನ್ನು ರಶಿಯಾದ ವಿರುದ್ಧ ಎರಗುವಂತೆ ಸಂಘಟಿಸುವದೇ ಆ ಒಳಸಂಚಿನ ಮುಖ್ಯ ಉದ್ದೇಶವಂತೆ. ನಾಲ್ಕೂ ಆಕ್ರಮಣ ವಿಭಾಗಗಳಲ್ಲಿ ಹಬ್ಬಿದೆಯೆಂದು ನಂಬಲಾದ ಈ ಒಳಸಂಚಿನ ಸಂಘದ ಕೇಂದ್ರ ಬ್ರಿಟಿಶ ಮತ್ತು ಅಮೇರಿಕನ್ ಆಕ್ರಮಣ ಭಾಗಗಳಲ್ಲೆ ಇತ್ತು. "ಅಪರೇಶನ್ ಸೆಲೆಕ್ಷನ್ ಬೋರ್ಡ" (ಯುದ್ಧ ಕ್ರಿಯಾ ಮಂಡಲ) ವೆಂಬ ಈ ಸಂಸ್ಥೆಯಲ್ಲಿ ನೂರಾರು ದುಶ್ಚರಿತ್ರರು ಸೇರಿದ್ದು ಅದರ ಮುಂದಾಳ್ತನ ಹಿಂದಿನ ನಾಜಿ ಗುಪ್ತಚಾರ (ಎಸ್ ಎಸ್) ಸಂಸ್ಥೆಯ ನಾಯಕರ ಕೈಯಲ್ಲಿದೆ. ತಮ್ಮ ಧ್ಯೇಯಕ್ಕೆ ಮಿತ್ರರು ಅಡ್ಡ ಬಂದರೆ "ಪ್ರಲಯಂಕರ ನೂತನ ಗುಪ್ತಾಸ್ತ್ರ" ದಿಂದ ಮಿತ್ರರನ್ನು ಹಣಿಯಲು ಅವರು ಹೊಂಚು ಹಾಕುತ್ತಿದ್ದರಂತೆ. ಈ ಗುಪ್ತಾಸ್ತ್ರವೇನೆಂಬುದು ಸರಿಯಾಗಿ ಗೊತ್ತಿರದಿದ್ದರೂ ಜರ್ಮನ್ ಸೇನಾನಾಯಕಮಂಡಲದ ರೋಗಾಣು ಶಾಖೆಯ ಅಧಿಕಾರಿಯಾದ ಹ್ಯಾನ್ಸ ಜಾರ್ಜ ಐಡಮ್ಯಾನನೂ ಈ ಒಳಸಂಚಿನಲ್ಲಿ ಸಿಕ್ಕಿಬಿದ್ದಿರುವದರಿಂದ ಆ ಗುಪ್ತಾಸ್ತ್ರವೆಂದರೆ ರೋಗಾಣು ಬಾಂಬೇ ಇರಬೇಕೆಂದೂಹಿಸಲಾಗಿದೆ. ಏಕಕಾಲದಲ್ಲಿ ಎಲ್ಲೆಡೆ ರೋಗಾಣು ಬಾಂಬುಗಳನ್ನು ಒಗೆದು ಮಿತ್ರಶಿಬಿರದ ರೋಗಗಳ ಜಣದಲ್ಲಿ ಕೋಲಾಹಲವೆಬ್ಬಿಸುವದೇ ಅವರ ಉಪಾಯವಾಗಿರಬೇಕು. ಇದು ಬಹು ಹುಚ್ಚು ಯೋಜನೆಯೆಂದು ಅಮೇರಿಕನ್ ಅಧಿಕಾರಿಗಳು ಹೇಳುತ್ತಿದ್ದರೂ ಇದರಿಂದ ಜರ್ಮನ್ ಜನತೆಯ ಮನಸಿನ ಮೇಲೆ ಸಾಕಷ್ಟು ಪರಿಣಾಮವಾಗಿದೆಯೆಂದು ಅವರೊಪ್ಪಿಕೊಳ್ಳುತ್ತಾರೆ.

## ಇಜಿಪ್ತದಿಂದ "ಚಲೇ ಜಾವ"

ಒಪ್ಪಂದ ಪುನರ್ವಿಮರ್ಶೆಯ ಮಾತುಕತೆ ನಿಷ್ಫಲವಾದರೂ ಬ್ರಿಟಿಶ ಪಡೆಗಳನ್ನು ಇಜಿಪ್ತ ರಾಜಧಾನಿ ಕಾಯರೋದಿಂದ ಮಾರ್ಚ ೩೧ ರೊಳಗೆ ಒಂದೂ ಉಳಿಯದಂತೆ ತಿರುಗಿ ತೆಗೆದುಕೊಳ್ಳಲಾಗುವದು. ಬ್ರಿಟಿಶರ "ಚಲೇಜಾವ್" ದಿಂದೊದಗುವ ಪರಿಸ್ಥಿತಿಯಿಂದುಂಟಾ ಸಮಸ್ಯೆಗಳನ್ನೆದುರಿಸಿ ಇಜಿಪ್ತ ಸಂರಕ್ಷಣೆಯನ್ನು ಪರಿಣಾಮಕಾರಿಯಾಗಿ ಮಾಡಲು ಇಜಿಪ್ಶನ್ ಸರಕಾರ ೫೦ ಕೋಟಿ ಪೌಂಡಿನ ಭೂಜಲ ಆಕಾಶ ಪಡೆಗಳ ಯೋಜನೆಯನ್ನು ಸಿದ್ಧಗೊಳಿಸುತ್ತಿದೆ. ಆದರೆ ಇಜಿಪ್ತದ ರಾಜಕೀಯ ಪರಿಸ್ಥಿತಿ ಅತ್ಯಂತ ಅನೈಕ್ಯದಿಂದ ಪಿಮ್ಮರಿಸುತ್ತಿದೆ. ಏನು ನಡೆಯುತ್ತಿದೆಯೋ ಯಾರಿಗೂ ಗೊತ್ತಿಲ್ಲ ವಫ್ದ, ರಾಷ್ಟ್ರೀಯ, ಕೊಟ್ಲ ಮೊದಲಾದ ರಾಜಕೀಯ ಪಕ್ಷಗಳು ಅಧಿಕಾರ ಕಸಿದುಕೊಳ್ಳಲು ತಮ್ಮ ತಮ್ಮೊಳಗೆ ಹೊಡೆದಾಡುತ್ತಿವೆ. ಯುಕ್ತ ರಾಷ್ಟ್ರ ಸಭೆಯ ಮುಂದೆ ಆಂಗ್ಲೊ-ಇಜಿಪ್ಶನ್ ವಿವಾದವನ್ನೊಯ್ಯಬೇಕೋ ಬೇಡವೊ ಒಯ್ದರೆ ಯಾವ ರೂಪದಲ್ಲೊಯ್ಯಬೇಕು, ಎಂದು ಕೂಡ ಇನ್ನೂ ನಿರ್ಧಾರವಾಗಿಲ್ಲ. ಪ್ರಗತಿಪರ ವಫ್ದ ಪಕ್ಷಕ್ಕೆ ಜನಬೆಂಬಲ ಬಹಳ ಇದೆ. ಆದರೆ ಅದಕ್ಕೆ ಬಹುಮತ ದೊರತೀತೆಂಬ ಭಯದಿಂದ ಮುಖ್ಯ ಮಂತ್ರಿ ನೋಕ್ರಾಸಿ ಹೊಸ ಚುನಾವಣೆಗಳನ್ನೇ ನಡೆಸುವದಿಲ್ಲ.! ನೋಕ್ರಾಸಿಯನ್ನು ಯಾತಕ್ಕೂ ಬಾರದ ಅಸಮರ್ಥನೆಂದು ವಫ್ದ ಮುಂದಾಳು ತೆರಳುತ್ತಾನೆ. ಈ ನಡುವೆ ಆಂಗ್ಲೊ-ಇಜಿಪ್ಶನ್ ವಿವಾದದಲ್ಲಿ ಮಧ್ಯಸ್ಥಿಕೆ ವಹಿಸಲು ಸಿರಿಯಾ-ಲೆಬನಾನ್‍ಗಳು ಮುಂದೆ ಬಂದಿವೆ.

## ದಕ್ಷಿಣ ಆಫ್ರಿಕೆಯಲ್ಲಿ ಚಕ್ರವರ್ತಿ

ಬ್ರಿಟಿಶ್ ಚಕ್ರವರ್ತಿ ಆರನೇ ಜಾರ್ಜರೂ ರಾಜಮಹಿಷಿಯೂ ದಕ್ಷಿಣ ಆಫ್ರಿಕೆಯಲ್ಲಿ ದಿಗ್ವಿಜಯ ಮಾಡುತ್ತಿರುವರು. ಎಲ್ಲ ವರ್ಣ ಸಮಾಜಗಳ ಜನರೂ ಅವರನ್ನೂ ಕೇಪ್‍ಟೌನ್‍ನಲ್ಲಿ ಭಕ್ತಿವಾತ್ಸಲ್ಯಗಳಿಂದ ಸ್ವಾಗತಿಸಿದರು. ಆದರೆ ಈ ಆನಂದೋತ್ಸವಗಳಲ್ಲಿ ಅಪಸ್ವರಗಳು ಹೇರಳವಾಗಿದ್ದವು. ದಕ್ಷಿಣ ಆಫ್ರಿಕೆಯಲ್ಲಿರುವ ಹಿಂದೀಯರು ಈ ಉತ್ಸವಗಳನ್ನು ಬಹಿಷ್ಕರಿಸಿದ್ದಾರೆ ಈ ಸಂಭ್ರಮದ ಸ್ವಾಗತದಲ್ಲಿ ನಾವು ಭಾಗ ವಹಿಸಲು ಬಯಸುತ್ತಿದ್ದೆವು—ಆದರೆ ಎಲ್ಲ ವ್ಯವಸ್ಥೆಗಳಲ್ಲಿಯೂ ವರ್ಣದ್ವೇಷ ಎದ್ದು ಕಾಣುವದರಿಂದ ನಾವು ಹೊರಗುಳಿಯಬೇಕಾಯಿತೆಂದು ದಕ್ಷಿಣ ಆಫ್ರಿಕಾ ಹಿಂದೀ ಕಾಂಗ್ರೆಸ್ ಮತ್ತು ಸತ್ಯಾಗ್ರಹ ಸಮಿತಿಗಳು ಪ್ರಕಟಿಸಿವೆ. ಕಮ್ಯುನಿಸ್ಟರೂ ಈ ಸಮಾರಂಭದಿಂದ ದೂರ ಉಳಿವರು. ಈ ವ್ಯರ್ಥ ಪ್ರದರ್ಶನದಲ್ಲಿ ೫ ಲಕ್ಷ ಪೌಂಡ್ ಅಪವ್ಯಯ ಮಾಡುವದಕ್ಕಿಂತ ಬೇರೆ ಸದ್ವಿನಿಯೋಗ ಮಾಡಬಹುದಾಗಿತ್ತು, ಎಂದವರು ಸಾರಿದ್ದಾರೆ.

## ಹಿಂದೀಯರ ಬಹಿಷ್ಕಾರ

ಎಲ್ಲ ಬಗೆಯಿಂದ ಹಿಂದೀಯರ ಬಾಳು ಮಾನಹೀನವಾಗುವಂತೆ ಮಾಡಲು ಹೆಣಗುತ್ತಿದ್ದ ದಕ್ಷಿಣ ಆಫ್ರಿಕೆಯ ಬಿಳಿಯರು ಈಗ ಅದನ್ನು ಎಲ್ಲ ಬಗೆಯಿಂದ ಅಸಾಧ್ಯವಾಗಿ ಮಾಡಲು ಹವಣಿಸುತ್ತಿದ್ದಾರೆ. ಯುಕ್ತರಾಷ್ಟ್ರ ಸಂಘಕ್ಕೆ ಈ ಪ್ರಶ್ನೆಯನ್ನೊಯ್ದು ತಮ್ಮ ಹೆಸರಿಗೆ ಮಸಿ ಬಳಿದ ಹೊಟ್ಟೆಯುರಿಯನ್ನು ತೀರಿಸಿಕೊಳ್ಳಲ ಅವರೀಗ ಬಹಿಷ್ಕಾರಾಸ್ತ್ರವನ್ನೆತ್ತಿದ್ದಾರೆ ಯುರೋಪಿಯನ್ನರಾರೂ ಹಿಂದೀಯರೊಡನೆ ವ್ಯಾಪಾರ ವ್ಯವಹಾರ ನಡೆಸಕೂಡದೆಂದು ವರ್ಣೋನ್ಮತ್ತರು ಸ್ವಯಂಕೃತ ಕಾಯದೆಯನ್ನು ಜಾರಿ ಮಾಡತೊಡಗಿದ್ದಾರೆ. ಪ್ರಿಟೋರಿಯಾ, ಪೀಟರ್‍ಮೆರಿಟ್ಝಬರ್ಗ್, ಜೋಹಾನ್ಸಬರ್ಗ ಡರ್ಬನ್, ಗ್ರೇಟನ್ ಮತ್ತು ನಾತಾಳಗಳಲ್ಲಿ ಈಗಾಗಲೆ ಇದಕ್ಕಾಗಿ ಸಮಿತಿಗಳನ್ನು ಸ್ಥಾಪಿಸಲಾಗಿದೆ. ಹಿಂದೀಯರ ಅಂಗಡಿಗಳನ್ನು ಪ್ರವೇಶಿಸುವ, ಅಥವಾ ಅಲ್ಲಿ ಕೆಲಸ ಮಾಡುವ ಅಥವಾ ಅವರನ್ನು ಕೆಲಸಕ್ಕೆ ಇಟ್ಟುಕೊಳ್ಳುವ ಯುರೋಪಿಯನ್ನರಿಗೆ ಕಾರು ಬಳಿದು ಅವಮಾನ ಮಾಡುವ ಶಿಕ್ಷೆಯನ್ನು ವಿಧಿಸಬೇಕೆಂದು ಅವರು ನಿರ್ಧರಿಸಿದ್ದಾರೆ. ಹಿಂದೀಯರೊಡನೆ ಕೆಲಸ ಮಾಡುವ ಯುರೋಪಿಯನ್ ಹುಡಿಗೆಯರನ್ನು ಹೀಗೆಯೆ ದಂಡಿಸುವರಂತೆ!

## ಅಂತರ್--ಏಶಿಯಾ ಸಮ್ಮೇಲನ

ಹಿಂದೀ ಸರಕಾರದ ಪ್ರೇರಣೆಯಿಂದ ಹಿಂದೀ ಜಾಗತಿಕ ವಿಚಾರ ಮಂಡಲದವರು ಮಾರ್ಚತಿಂಗಳಲ್ಲಿ ನಡೆಸಬೇಕೆಂದಿರುವ ಅಂತರ್-ಏಶಿಯಾ ಆರ್ಥಿಕ ಮತ್ತು ಸಾಂಸ್ಕೃತಿಕ ಸಮ್ಮೇಲನವನ್ನು ಯುರೋಪಿಯನ್ ರಾಜಕಾರಣಿಗಳು ವ್ಯಗ್ರಚಿತ್ತದಿಂದ ನೋಡುತ್ತಿದ್ದಾರೆಯೆಂದು ಒಂದು ಇಜಿಪ್ಶನ್ ಪತ್ರಿಕೆಯಲ್ಲಿ ಬಂದಿದೆ. ಪ್ಯಾರಿಸಿನಲ್ಲಿ ಫ್ರೆಂಚ ರಾಜಕಾರಣಿಗಳು ಈ ಸಮ್ಮೇಲನದ ಬಗ್ಗೆ ದೊರೆತಿರುವ ತುಂಡು ತುಣುಕು ಸುದ್ದಿಗಳನ್ನು ಜೋಡಿಸಿ ಅರ್ಥ ಕಂಡು ಹಿಡಿಯಲು ಪ್ರಯತ್ನಿಸುತ್ತಿರುವರಂತೆ. ಏಶಿಯಾದಿಂದ ಯುರೋಪಿಯನ್ ಪ್ರಭಾವವನ್ನು ಹೊಡೆದಟ್ಟುವ ಪ್ರಯತ್ನವನ್ನು ಅವರು ಇದರಲ್ಲಿ ಕಾಣುತ್ತಿದ್ದಾರೆ. ಇಂಡೋಚೀನ, ಇಂಡೋನೇಶಿಯಾ ಮೊದಲಾದದೇಶಗಳ್ಲ್ಲಿನ ಸಾಮ್ರಾಜ್ಯಗಳ ಮೇಲಿನ ಮುಂಗಮುಷ್ಟಿಯನ್ನು ಸಡಿಲಿಸಲೊಪ್ಪದ ಯುರೋಪಿಯನ್ ರಾಷ್ಟ್ರಗಳು ಏಶಿಯಾದ ಪರಾಧೀನ ರಾಷ್ಟ್ರಗಳ ಪ್ರತಿನಿಧಿಗಳನ್ನು ಈ ಸಮ್ಮೇಲನಕ್ಕೆ ಕರೆದುದರಿಂದ ಗಾಬರಿಗೊಂಡಿವೆ. ತಾನೇ ಇನ್ನೂ ಸ್ವಾತಂತ್ರ್ಯದ ಹೊಸಲಲ್ಲಿರುವ ಹಿಂದುಸ್ತಾನ ಈಗಲೆ ಏಶಿಯಾದ ಮುಂದಾಳ್ತನಕ್ಕೆ ಕೈಯೊಡ್ಡಿದೆಯೆಂದು ಅವರು ಹೇಳತೊಡಗಿರುವರಂತೆ. ಆಸ್ಟ್ರೇಲಿಯಾ ಆವರೂ ಈ ಸಮ್ಮೇಲನದಿಂದ ಸಂತೋಷಗೊಂಡಿಲ್ಲ. ಏಶಿಯಾದ ಜನರು ಐಕ್ಯಗೊಂಡರೆ ಆಸ್ಟ್ರೇಲಿಯಾದ ಮೇಲಿನ ಬಿಳಿಯರ ಸ್ವಾಮಿತ್ವಕ್ಕೆ ಗಂಡಾಂತರ ಬಂದೀತೆಂದು ಅದು ಬೆದರಿದೆ. ಅವರ ಮುಖ್ಯ ಮಂತ್ರಿ ಇವಾಟರು. "ಬಿಳಿ ಆಸ್ಟ್ರೇಲಿಯಾ" ಧೋರಣವನ್ನು ಇನ್ನಷ್ಟು ಬಿಗಿಗೊಳಿಸಿ ಈ ಪ್ರಯತ್ನಕ್ಕೆ ಪ್ರತಿಕಾರ ಮಾಡಬಹುದೆಂಬ ಸುದ್ದಿ.

## ತುಣುಕುಗಳು

ರಂಗೂನಿನಿಂದ ೪೦ ಮೈಲು ದೂರ ಇರುವ ಪೇಗುವಿನಲ್ಲಿದ್ದ ೧೦೦೦ ಬ್ರಹ್ಮ ಸೈನಿಕರು ತಮ್ಮ ಅಧಿಕಾರಿಗಳ ವಿರುದ್ಧ ದಂಗೆಯೆದ್ದಿದ್ದಾರೆ.

ಬ್ರಹ್ಮದೇಶದ ನಾಗರಿಕ ಸ್ಥಿತಿ ಬಹಳ ಕೆಟ್ಟಿದೆ. ರಂಗೂನ ಧಕ್ಕೆ ಕೂಲಿಕಾರರು ಸಂಪು ಹೂಡಿದ್ದಾರೆ. ಸರಕಾರಿ ನೌಕರರು ಸಂಬಳ ಬೆದರಿಕೆ ಹಾಕಿದ್ದಾರೆ. ಎಲ್ಲೆಲ್ಲಿಯೂ ಕಳ್ಳತನ ನಡೆದಿವೆ. ಜನರು ಆಹಾರ ಸಂಗ್ರಹ ಮಾಡಿಟ್ಟುಕೊಳ್ಳುವದರಿಂದ ಅರಾಜಕತೆಯುಂಟಾಗಿದೆ.

ಜಪಾನದಲ್ಲಿ ಕಳೆದ ವಾರ ಭಯಂಕರ ರೇಲ್ವೆ ಅಪಘಾತವೊಂದು ಸಂಭವಿಸಿ ೧೭೪ ಜನರು ಸತ್ತರು ೮೦೦ ಜನ ಗಾಯಗೊಂಡರು. ಆರತಿ ಎತ್ತರದ ಮಾರ್ಗದಿಂದ ಗಾಡಿ ಕೆಳಗುರುಳಿತು. ಈ ಗಾಡಿತುಂಬ ಕಳ್ಳಪೇಟೆ ಸಾಮುಗ್ರಿಗಳಿದ್ದವಂತೆ!

ಕೋಚೀನ್ ಚೀನದ ಪ್ರಮುಖರಲ್ಲೊಬ್ಬರಾದ ಕರ್ನಲ್ ಝುವಾನರು ಕೋಚೀನ್-ಚೀನ, ಅಣ್ಣಾಂ ಮತ್ತು ಟೊಂಗ್‍ಕಿಂಗ್ ಪ್ರಾಂತಗಳ ಒಂದು ಸ್ವತಂತ್ರ ಯೂನಿಯನ್ ಸ್ಥಾಪಿಸಿದರೆ ಇಂಡೋಚೀನದ ಸಮಸ್ಯೆ ಬಗೆಹರಿಯುವದೆಂದು ಸೂಚಿಸಿದ್ದಾರೆ. ೧೩೦೦೦ ಸೈನ್ಯ ಬಲವನ್ನಿತ್ತು ಕೈಗೊಂಡ ಸರಕಾರವೊಂದನ್ನು ಕೋಚೀನ ಚೀನದಲ್ಲಿ ಫ್ರೆಂಚರು ಪ್ರತಿಷ್ಠಾಪಿಸಿದ್ದಾರೆ. ಇತ್ತ ಕೋಚೀನ್ ಚೀನದಲ್ಲಿ ದಂಗೆಯು ಪ್ರಾರಂಭವಾಗಿವೆ.

ಅಮೇರಿಕೆಯಲ್ಲಿ ಯುದ್ಧಕಾಲದ ನಿಯಂತ್ರಣಗಳನ್ನು ಹಿಂತೆಗೆದುಕೊಳ್ಳಬೇಕೆಂದು ಅಧ್ಯಕ್ಷ ಟ್ರೂಮನ್ನರು ನಿರ್ಧರಿಸಿದ್ದಾರೆ.

## ಹಿಂದುಸ್ತಾನದ ಹೊಸ ವಾಯಿಸರಾಯರು

### ಹಲವು ರಣರಂಗಗಳ ವೀರ ಅಪ್ರತಿಮ ಸಾಹಸಿ

ಹಿಂದುಸ್ತಾನದ ಹೊಸ ವಾಯಿಸರಾಯರಾದ ರೇರ-ಅಡ್ಮಿರಲ್ ವಾಯಕೌಂಟ ಲುಯಿ ಫ್ರಾನ್ಸಿಸ್ ಅಲ್ಬರ್ಟ ವಿಕ್ಟರ ನಿಕೊಲಸ್ ಮೌಂಟ ಬ್ಯಾಟನ್ ಆಫ್ ಬರ್ಮಾ ಅವರು "ಶ್ರೀಮಂತ ಯೋಧ" ಎಂದು ಪ್ರಸಿದ್ಧರಾಗಿದ್ದಾರೆ. ಈ ಯುದ್ಧದ ಆರಂಭದಲ್ಲಿ ಅವರು ಬರಿ ಕ್ಯಾಪ್ಟನ್ ಆಗಿದ್ದರೂ ಒಳ್ಳೆ ಹೆಸರುವಾಸಿಯಾಗಿದ್ದರು. ಎರಡೇ ವರ್ಷಗಳ ನಂತರ ಅವರು ರಾಷ್ಟ್ರೀಯ ವೀರರಾದರು. ಹಿಟ್ಲರನ ಯುರೋಪದ ಮೇಲೆ ಡಿಪ್ಪಿ ಮೊದಲಾದೆಡೆ [illegible] ನಡೆಸಿದ ಸಾಹಸ ಪೂರ್ಣ ದಾಳಿಯ ಮುಂದಾಳುಗಳಾಗಿ ಅಸಾಧಾರಣ ಧೈರ್ಯವನ್ನು ತೋರಿಸಿದರು. ಆನಂತರ ಎರಡು ವರ್ಷಗಳಲ್ಲಿ ಆಗ್ನೇಯ ಏಶಿಯಾ ರಣರಂಗದ ವರಿಷ್ಠ ನಾಯಕರಾಗಿ ನೇಮಿಸಲ್ಪಟ್ಟ ಅವರು ಜಪಾನರಿಗೆ ಭೂಯುದ್ಧದ ಅತ್ಯಂತ ಪ್ರಚಂಡ ಪರಾಜಯವನ್ನುಂಟು ಮಾಡಿದ್ದರಿಂದ ಕಳೆದ ವರ್ಷ ಅವರನ್ನು ವೈಕೌಂಟ ಪದವಿಗೆ ಏರಿಸಿದಾಗ ಅವರ ಹೆಸರಿಗೆ "ಬ್ರಹ್ಮದೇಶದ" ಎಂದು ಸೇರಿಸಲಾಯಿತು.

ಅಡ್ಮಿರಲ್ ಮೌಂಟಬ್ಯಾಟನ್ [illegible] ರಾಜವಂಶಕ್ಕೆ ಸೇರಿದವರು [illegible] ಅವರ ಸಾಹಸ [illegible] ಪ್ರಸಿದ್ಧವಾಗಿದೆ. ಈ [illegible] ಅವರ [illegible] ಅವರ ತಂದೆ "ರಾಜಾ" (ಪ್ರಿನ್ಸ) ಲುಯಿ ಬ್ಯಾಟನ ಬರ್ಗ [illegible] ಕೇವಲ ಮೌಂಟಬ್ಯಾಟನ ಎಂಬ ಹೆಸರು ಧರಿಸಿದರು.

ಜುಲೈ ೨೫, ೧೯೦೦ರಲ್ಲಿ ಜನಿಸಿದ ಈ ಭಾವಿ ನೌಕಾದಳಾಧಿಪ [illegible] ವಯಸ್ಸಿನಲ್ಲೇ ನೌಕಾ ವಿದ್ಯಾರ್ಥಿ [illegible] ಯುದ್ಧಾರಂಭದಲ್ಲಿ ೧೯೪೦ರಲ್ಲಿ "ಕೆಲಿ" ಎಂಬ ವಿನಾಶಿನಿ [illegible] ಜರ್ಮನ [illegible] ದಿಂದ ಧಕ್ಕೆಗೊಂಡಾಗ ಸಾಹಸದಿಂದ ಅದನ್ನು ಸ್ವದೇಶಕ್ಕೆ ತಂದುದರಿಂದ ಅವರಿಗೆ ವಿಶಿಷ್ಟ ಸೇವೆಯ ಬಿರುದು ದೊರಕಿತು. ಮುಂದೆ ಮೇ ತಿಂಗಳಲ್ಲಿ ಹಡಗು ಟಾರ್ಪೆಡೊಗೆ ಆಹುತಿಯಾದಾಗ ಮೂರು ಹಗಲಿರುಳುಗಳ ಬಾಂಬ ದಾಳಿಯ ನಡುವೆ ಅದನ್ನು ಸ್ವದೇಶಕ್ಕೆ ಮುಟ್ಟಿಸಿದರು. ಮೂರನೆ ಬಾರಿ ಕ್ರೀಟ ಬಳಿ ಅದ ಜಲಸಮಾಧಿ ಹೊಂದಿದಾಗ ಮೌಂಟಬ್ಯಾಟನ್ನರನ್ನೂ ಅವರ ಜೊತೆಗಾರರನ್ನೂ ಸಮುದ್ರದಿಂದ ಎತ್ತಿ ಪಾರುಮಾಡಲಾಯಿತು. ಈ ಎಲ್ಲ ಸಾಹಸಗಳ ಮತ್ತು ಡಿಪ್ಪಿ ದಾಳಿಯ ಮುಂದಾಳ್ತನ ವಹಿಸಿದ ಪರಿಣಾಮವಾಗಿ ನೌಕಾ ಬಲದ ಅತ್ಯುಚ್ಚ ಅಧಿಕಾರವಾದ ಅಡ್ಮಿರಲ ಪದವಿ ಅವರಿಗೆ ಲಭಿಸಿತು.

ಮೌಂಟ ಬ್ಯಾಟನ್ನರನ್ನು ಕೊನೆಯ ವಾಯಿಸರಾಯರಾಗಿ ಆರಿಸಿದ್ದಕ್ಕೆ ಅವರು ರಾಜವಂಶದವರೆಂಬುದೇ ಕಾರಣವಲ್ಲವಂತೆ. "ಕೆಲಸ ಮಾಡಿ ತೋರಿಸುವ" ಅವರ ಸಾಮರ್ಥ್ಯವೇ ಇದಕ್ಕೆ ಕಾರಣವೆಂದು ಹೇಳಲಾಗಿದೆ. ಅವರ ವ್ಯಕ್ತಿತ್ವ ಆಕರ್ಷಕವಾಗಿದೆ. ಕ್ರಿಯಾ ಸಂಯೋಜನೆಯ ಚಾತುರ್ಯದಲ್ಲಿ ಅವರು ಹೆಸರು ವಾಸಿಯಾಗಿದ್ದಾರೆ. ಪೂರ್ವ ದೇಶಗಳಲ್ಲಿ ಅವರಿಗಿರುವ ಗೌರವವೂ ಈ ಆಯ್ಕೆಗೆ ಪುಷ್ಟಿ ಕೊಟ್ಟಿರಬಹುದು. ಅವರು ನೆಹರೂ ಅವರ "ಗೆಳೆಯ"ರೆಂಬುದು ಅಷ್ಟು ಸರಿಯಾಗಲಿಕ್ಕಿಲ್ಲವಾದರೂ ಅವರ ವಿಚಾರಗಳು ಪ್ರಗತಿಪರವಾಗಿವೆಯೆನ್ನಲು ಅಡ್ಡಿಯಿಲ್ಲ. ಹಿಂದೀಯರ ಕೈಗೆ ಯಶಸ್ವಿಯಾಗಿ ಅಧಿಕಾರವನ್ನು ವಹಿಸಿಕೊಡುವ ಹೊಣೆಯನ್ನು ಹಳೆ ಪದ್ಧತಿಯ ಯುದ್ಧಕಲೆಯಲ್ಲಿ ಪಳಗಿ ಕಳೆದ ಮಹಾಯುದ್ಧದಲ್ಲಿ "ಪ್ರಚಂಡ ಪಲಾಯನ"ಗಳಿಂದ ಹೆಸರಾದ ವೇವೆಲ್ಲರು ಹೊರಲು ಸಿದ್ಧರಾಗದ್ದರಿಂದ ಸಾಹಸಜೀವಿಯಾದ ಈ ರಾಜರಕ್ತದ ಯೋಧನಿಗೆ ಆ ಮಹಾಕಾರ್ಯವನ್ನೊಪ್ಪಿಸಲಾಗಿದೆ.

ವ್ಯಾಪಾರಿಗಳು ಹಿಂದೀ ಸಾಮ್ರಾಜ್ಯವನ್ನು ಗೆದ್ದರು— ರಾಜಕುಟುಂಬದವನೊಬ್ಬನಿಗೆ ಆ ಸಾಮ್ರಾಜ್ಯಧ್ವಂಸದ ಕಾರ್ಯವೊಪ್ಪಿಸಲ್ಪಟ್ಟಿದೆ. ಎಂಥ ವಿರೋಧಾಭಾಸ!

## ಮದ್ರಾಸದಲ್ಲಿ ಬಹುಪತ್ನೀತ್ವ ಪ್ರತಿಬಂಧ ಮಸೂದೆ

### ಒಕ್ಕಲತನದ ಉತ್ಪನ್ನದ ಮೇಲೆ ಕರ ಹೇರುವದು

ಹಿಂದುಗಳಲ್ಲಿ ಬಹುಪತ್ನೀತ್ವ ಪ್ರತಿಬಂಧಕ ಮತ್ತು ಘಟಸ್ಫೋಟಕ್ಕೆ ಅಪ್ಪಣೆ ಕೊಡುವ ಮಸೂದೆ ಮದ್ರಾಸ ಶಾಸನ ಸಭೆಯಲ್ಲಿ ಮಂಡಿಸಲ್ಪಟ್ಟದ್ದು ೧೯ನೇ ತಾರೀಖಿನ ಮದ್ರಾಸ ಗ್ಯಾಝಿಟದಲ್ಲಿ ಪ್ರಸಿದ್ಧಿಸಲ್ಪಟ್ಟಿದೆ. ಒಬ್ಬ ಹೆಂಡತಿ ಅಥವಾ ಗಂಡ ಜೀವಂತ ಇರುವಾಗ ಮತ್ತೊಬ್ಬ ಗಂಡ ಅಥವಾ ಹೆಂಡತಿಯನ್ನು ಮದುವೆ ಆಗದಂತೆ ಈ ಮಸೂದೆಯಿಂದ ನಿರ್ಬಂಧಿಸಲಾಗಿದೆ. ಆದರೆ ಪರಸ್ಪರ ಕೂಡಿ ನಡೆಯದಿದ್ದರೆ ಘಟಸ್ಫೋಟ ಮಾಡಿಕೊಳ್ಳುವ ಅವಕಾಶವನ್ನೂ ಇದರಲ್ಲಿ ಕೊಡಲಾಗಿದೆ. ಹೀಗೆ ಘಟಸ್ಫೋಟವಾಗಿ ೬ ತಿಂಗಳ ನಂತರ ಪುನರ್ವಿವಾಹ ಮಾಡಿಕೊಳ್ಳುವ ಅವಕಾಶವನ್ನೂ ಕೊಟ್ಟಿದೆ. ಹೆಣ್ಣುಮಗಳು ಅಪರಾಧಿಯಾಗದಿದ್ದ ಸಂದರ್ಭದಲ್ಲಿ ಅವಳು ಪುನರ್ವಿವಾಹವಾಗುವವರೆಗೆ ಗಂಡನು ಅವಳಿಗೆ ಮಾಸಾಶನ ಕೊಡತಕ್ಕದ್ದು, ಚಿಕ್ಕಮಕ್ಕಳ ರಕ್ಷಣೆಗಾಗಿಯೂ ಹಣವನ್ನು ಸಲ್ಲಿಸಬೇಕು.

ಪ್ರಾಂತದಲ್ಲಿ ಸಾರ್ವಜನಿಕ ಸುವ್ಯವಸ್ಥೆಯ ಮಸೂದೆಯೊಂದು ಮದ್ರಾಸ ಗ್ಯಾಜಿಟದಲ್ಲಿ ಪ್ರಸಿದ್ಧವಾಗಿದೆ. ಸ್ಥಾನಬದ್ಧತೆ ಸಾಮೂಹಿಕ ದಂಡ ಹೇರುವದು, ಸಭೆ ಮೆರವಣಿಗೆಗಳ ನಿಯಂತ್ರಣ ಅವಶ್ಯಕ ಸರ್ವೀಸುಗಳ ನಿಯಂತ್ರಣ ಹಾಗು ಇನ್ನೂ ಹಲವು ಯೋಜನೆಗಳು ಈ ಮಸೂದೆಯಲ್ಲಿ ಇವೆ. ಮದ್ರಾಸ ಸಾರ್ವಜನಿಕ ಸುರಕ್ಷಿತತೆಯ ಆರ್ಡಿನನ್ಸ ಕಲಮುಗಳಲ್ಲಿ ಕೆಲ ಬದಲಾವಣೆಗಳನ್ನು ಮಾಡಿ ಈ ಮಸೂದೆಯನ್ನು ಸಿದ್ಧಪಡಿಸಲಾಗಿದೆ.

ಈ ಪ್ರಾಂತದಲ್ಲಿ ತಲೆಮಾರುಗಳಿಂದ ನಡೆದು ಬಂದಿದ್ದ ಕಂದಾಯ ಪದ್ಧತಿಯನ್ನು ಬದಲಿಸುವ ಪ್ರಯತ್ನವನ್ನು ಮದ್ರಾಸ ಸರಕಾರ ನಡೆಸಿದೆ. ಇದಕ್ಕಾಗಿ ಒಬ್ಬ ವಿಶೇಷ ಅಧಿಕಾರಿಯನ್ನು ನೇಮಿಸಲಾಗುವದು. ಹೊಲಗಳಲ್ಲಿ ಬರತಕ್ಕ ಬೆಳೆಗಳ ಮೇಲೆ ಕರ ಹೇರಿ ಹಸ್ತೆ ಎತ್ತುವ ಪದ್ಧತಿಯನ್ನು ನಿಲ್ಲಿಸಿ ಬಿಡಬೇಕೆಂಬ ಬಗ್ಗೆ ಈ ವಿಶೇಷ ಅಧಿಕಾರಿ ವರದಿ [illegible]. ೫೦೦೦ ರೂಪಾಯಿಗಳಿಗಿಂತ ಹೆಚ್ಚಿಗಿದ್ದ ಒಕ್ಕಲತನ ಉತ್ಪನ್ನದ ಮೇಲೆ ಕರ ಹೇರಬೇಕೆಂಬ ಇನ್ನೊಂದು ಮಸೂದೆ ಶಾಸನ ಸಭೆಯಲ್ಲಿ ಬರಲಿದೆ.

## ಮಹಾತ್ಮರಿಗೆ ಒಂದು ಲಕ್ಷ ರೂ. ಗಳ ಹಮ್ಮಿಣಿ

ಮಹಾತ್ಮಾ ಗಾಂಧಿಯವರಿಗೆ ಒಂದು ಲಕ್ಷ ರೂಪಾಯಿಗಳ ಹಮ್ಮಿಣಿಯನ್ನು ಅರ್ಪಿಸಬೇಕೆಂದು ನೌಖಾಲಿ ಪರಿಹಾರ, ಪುನರ್ವ್ಯವಸ್ಥೆಯ ಸಮಿತಿಯು ಇತ್ತೀಚೆಗೆ ಕಲಕತ್ತೆಯಲ್ಲಿ ಸಭೆ ಸೇರಿದಾಗ ನಿರ್ಧರಿಸಿದೆ.

ನೌಖಾಲಿಯಲ್ಲಿ ಶಾಶ್ವತವಾದ ವಿಧಾಯಕ ಕಾರ್ಯ ಕೈಕೊಳ್ಳಬೇಕು ಎಂಬ ಬಿನ್ನಹ ಮಾಡಿಕೊಂಡು ಈ ನಿಧಿಯನ್ನು ಮಾರ್ಚದಲ್ಲಿ ಮಹಾತ್ಮರಿಗೆ ಒಪ್ಪಿಸಲಾಗುವದಂತೆ.

## ಅಮೇರಿಕೆಯಲ್ಲಿ ೨೮೦೦ ಟನ್ ಚಿನ್

ಅಮೇರಿಕೆಯ ಟಂಕ ಸಾಲೆಯಲ್ಲಿ ಇಪ್ಪತ್ತೆಂಟು ಸಾವಿರ ಟನ್ ಬಂಗಾರವಿರುವದು. ಇದನ್ನು ಸಂಗ್ರಹಿಸಿಡುವದು ಒಂದು ದೊಡ್ಡ ಸಮಸ್ಯೆಯಾಗಿರುವದು. ಮೂವತ್ತು ಸಾವಿರ ಟನ್ ಬೆಳ್ಳಿಯೂ ಇವೆ. ಚಿನ್ನದ ಸಂಗ್ರಹ ಹೇರಳವಿರುವದರಿಂದ ಅಮೇರಿಕೆಯು ಅದರ ಬೆಲೆಯನ್ನು ಏರಿಸುವ ಆಶೆ ಬಹಳ ಕಡಿಮೆಯೆಂದು ಅರ್ಥಸಚಿವರಾದ ಸಿಂಡರರು ಹೇಳಿದರು.

---

ಹೈದ್ರಾಬಾದ ಇತ್ತಿಹಾದುಲ್ ಮುಸಲ್ಮಾನ ಸಲಹೆ ಸಮಿತಿಯು ತಾ. ೧೬ಕ್ಕೆ ಸಭೆ ಸೇರಿ ಹೈದ್ರಾಬಾದಿನಲ್ಲಿ ಸರ್. ಮಿರ್ಜಾ ಸಾಹೇಬರ ಅಳಿಕೆ ದೌಲತ ಅಸಿಫಿಯಾ ಇಸ್ಲಾಮಿಯಾಕ್ಕೂ ಮುಸಲ್ಮಾನ ಇತಿಹಾಸಿಗೂ ಜೀವನಕ್ಕೂ ಅತ್ಯಂತ ಅಪಾಯಕರವಾಗಿದ್ದು ಅವುಗಳನ್ನು ಕಡೆಗಣಿಸುವದಾಗಿದೆ. ಅದನ್ನೆದುರಿಸಲು ಎಲ್ಲ ಮುಸಲ್ಮಾನರು ಸಿದ್ಧರಾಗಬೇಕು ಎಂದು ಅವರು ಹೇಳಿದರು.

---

ಹೊಳಲ್ಕೆರೆ ತಾಲೂಕ ಹರಿಜನ ಸಮ್ಮೇಲನ ಚಿಕ್ಕ ಜಾಜೂರಿನಲ್ಲಿ ೨೪ಕ್ಕೆ ಸೇರಿ ಯಶಸ್ವಿಯಾಗಿ ಜರುಗಿತು. ಶಿವಮೊಗ್ಗೆಯ ಶ್ರೀ ಸಿದ್ದಯ್ಯನವರು ಅದರ ಉದ್ಘಾಟನ ಮಾಡಿದರು. ಶ್ರೀ ಚೆಂಗಲರಾಯರೆಡ್ಡಿಯವರು ಅಧ್ಯಕ್ಷತೆ ವಹಿಸಿದ್ದರು. ಹರಿಜನರು ಬೇರೆಯಲ್ಲ. ಅವರನ್ನು ನಾವು ಕಡೆಗಣಿಸುವದು ಲಜ್ಜಾಸ್ಪದ. ಸ್ವಾತಂತ್ರ್ಯ ಯುಗದ ಈ ಕಾಲದಲ್ಲಿ ಎಲ್ಲರೂ ಸಹಕರಿಸಿ ಐಕಮತ್ಯದಿಂದ ನಡೆಯಬೇಕೆಂದು ಮುಂತಾಗಿ ಅಧ್ಯಕ್ಷರು ಹೇಳಿದರು.

# ಮುಸ್ಲಿಂ ಲೀಗಿಗೆ ಪಂ. ಜವಾಹರರ ಸೌಹಾರ್ದದ ಕರೆ :

## ಐತಿಹಾಸಿಕ ಕಾರ್ಯದಲ್ಲಿ ಸಹಕರಿಸಲು ವಿನಂತಿ : ಜಿನ್ನಾರ ಮನೋವೃತ್ತಿಯಲ್ಲಿ ಬದಲಾವಣೆ ? — ಆ್ಯಟ್ಲಿಯವರು ಹಿಂದುಸ್ಥಾನಕ್ಕೆ ಬರುವರೆ ?

೧೯೪೮ ಜೂನ ತಿಂಗಳಲ್ಲಿ ಹಿಂದುಸ್ಥಾನದಿಂದ ಹೊರಟಿದ್ದು ಹೋಗುವ ಬ್ರಿಟಿಷ ಘೋಷಣೆಯ ಬಗ್ಗೆ ಯಾರೇನೇ ಅಭಿಪ್ರಾಯಪಡಲಿ, ಅದು ಹಿಂದೀಯರಿಗೊಂದು ಆಹ್ವಾನವೆಂದು ಹೇಳಲು ಯಾವದೆ ಅಡ್ಡಿಯಿಲ್ಲ. ಅದರಲ್ಲಿರುವ ಅತಿ ಮಹತ್ವದ ಅಂಶವೆಂದರೆ ಅಧಿಕಾರ ತ್ಯಾಗಕ್ಕೆ ಒಂದು ನಿರ್ದಿಷ್ಟ ದಿನ—ಅದೂ ೧೬ ತಿಂಗಳಲ್ಲಿ—ಗೊತ್ತು ಪಡಿಸಿದ್ದು. ಇದೇ ಅಂಶಕ್ಕಾಗಿ ಬ್ರಿಟಿಶ ಟೋರಿ ಪ್ರತಿಗಾಮಿಗಳು ಆಕ್ಷೇಪವೆತ್ತಿರುವದು ಮತ್ತು ಇದಕ್ಕಾಗಿಯೆ—ಉಳಿದ ಅಂಶಗಳು ಅಸ್ಪಷ್ಟವಾಗಿದ್ದರೂ—ಪಂ. ಜವಾಹರಲಾಲರು ಆಟ್ಲಿಯವರ ಘೋಷಣೆಯನ್ನು "ಜಾಣತನದ್ದೂ ಧೈರ್ಯದ್ದೂ ಇದೆ"ಯೆಂದು ಕೊಂಡಾಡಿದ್ದು. ಈ ಬಗೆಯಾಗಿ ಹಿಂದುಸ್ಥಾನವನ್ನು, ಅರಾಜಕತೆಯಲ್ಲಾದರೂ ಚಿಂತೆಯಿಲ್ಲ, ಬಿಟ್ಟು ಹೋಗಿರಿ, ಎಂದು ಗಾಂಧೀಜಿ ೧೯೪೨ ರಲ್ಲೆ ಕರೆಕೊಟ್ಟಿದ್ದರು. ಬ್ರಿಟಿಶ ಸರಕಾರದವರು ಪರಿಸ್ಥಿತಿಗೆ ತಲೆವಾಗಿ ಒಮ್ಮೆ ಆ ಪಕ್ಷಕ್ಕೆ ಇನ್ನೊಮ್ಮೆ ಈ ಪಕ್ಷಕ್ಕೆ ಅನುಕೂಲವಾಗಿ ವರ್ತಿಸಿ ಮೇ ೧೬ ರ ಘೋಷಣೆಯಿಂದ ಹುಟ್ಟಿದ ಅನುಕೂಲ ವಾತಾವರಣವನ್ನು ಹದಗೆಡಿಸುತ್ತ ಬಂದಾಗ ಹಿಂದುಸ್ಥಾನದ ಸ್ವಾತಂತ್ರ್ಯಪಿಪಾಸುಗಳು ಮತ್ತೆ ಇದೇ ಮಾತನ್ನು ಆಡತೊಡಗಿದ್ದರು. ನೀವಿಲ್ಲಿದ್ದಷ್ಟು ದಿನ—ನಿಮ್ಮ ಉದ್ದೇಶವೆಷ್ಟೇ ಸಾಧುವಾಗಿರಲೊಲ್ಲದೇಕೆ—ನಾವು ಒಂದಾಗುವದು ಸಾಧ್ಯವಿಲ್ಲ ಎಂಬ ಭಾವನೆ ಬೇರೂರತೊಡಗಿತ್ತು. ಸರಿ, ಈಗ ಬ್ರಿಟಿಶ ಸರಕಾರವೂ ತಡವಾಗಿದ್ದರೂ ಚಿಂತೆಯಿಲ್ಲ, ಈ ಅಭಿಪ್ರಾಯಕ್ಕೆ ಬಂದಿದೆಯೆಂದು ತೋರುತ್ತದೆ. ಅದೀಗ ಈ ಸಲಹೆಯನ್ನು ಸ್ವೀಕರಿಸಿದೆ. ಮತ್ತು ಆ ಮೂಲಕ ಎಲ್ಲ ಹೊಣೆಯನ್ನು ಹಿಂದೀ ಮುಂದಾಳುಗಳ ಮೇಲೆ ಹೊರಳಿಸಿಬಿಟ್ಟಿದೆ.

### ಅಸಾಧ್ಯ ಹೊಣೆಗಾರಿಕೆ

ಈ ಪ್ರಚಂಡ ಆಹ್ವಾನ ಮತ್ತು ಅದನ್ನು ಸ್ವೀಕರಿಸಿದರೆ ನಮ್ಮ ಮೇಲೆ ಬರುವ ಹೊಣೆ ಇವು ದುರ್ಬಲ ಹೃದಯಗಳನ್ನು ಭ್ರಾಂತವಾಗಿ ಮಾಡಿಬಿಡಬಹುದು. ೪೦ ಕೋಟಿ ದೀನ ದರಿದ್ರ ಅತೃಪ್ತ ಜನರ ಭವಿತವ್ಯವನ್ನು ರೂಪಿಸುವ ಹೊಣೆಯನ್ನು ಹೊರಲು ಮುಂದಾಳುಗಳು ಮುಂದೆ ಬರಬೇಕಾಗಿದೆಯೆಂಬುದರಲ್ಲಷ್ಟೇ ಈ ಆಹ್ವಾನದ ಪ್ರಚಂಡತೆ ಅಡಕವಾಗಿಲ್ಲ ಅದು ಹಿಂದೀ ಐಕ್ಯಕ್ಕೂ ಒಂದು ಆಹ್ವಾನವಾಗಿದೆ ಯಾವುದೇ ಸ್ವರೂಪದ ಕೇಂದ್ರ ಸರಕಾರಕ್ಕೋ ಅಥವಾ ಕೆಲ ಪ್ರದೇಶಗಳಲ್ಲಿ ಪ್ರಾಂತಿಕ ಸರಕಾರಗಳಿಗೋ ಇಲ್ಲವೇ ಹಿಂದೀ ಜನರ ಹಿತಕ್ಕೆ ಸಮಂಜಸವಾಗುವಂತೆ ಇನ್ನಾವ ವಿಧದಲ್ಲೋ ಅಧಿಕಾರವನ್ನು ವಹಿಸಿಕೊಡಲಾಗುವದೆಂದು ಆಟ್ಲಿಯವರ ಶ್ವೇತಪತ್ರದ ಒಕ್ಕಣೆ. ಇದು ಲೀಗಿನವರನ್ನು ನಡುಗಾಲ ಸರಕಾರದಿಂದ ತಳ್ಳಿ ಹಾಕಿರೆಂದು ಬೇಡುವ ಕಾಂಗ್ರೆಸ್ಸಿಗೂ ಸಂಗಡಲೇ ಘಟನಾ ಸಮಿತಿಯನ್ನು ವಿಸರ್ಜಿಸಿರೆಂದು ಕೇಳುವ ಲೀಗಿಗೂ ಎಚ್ಚರಿಕೆಯೆಂಬಂತಿದೆ. ಕಾಂಗ್ರೆಸ್ಸು ಅಲ್ಪಸಂಖ್ಯಾಕರಿಗೆ ತೃಪ್ತಿಕರವಾಗುವಂತೆ ನಡೆಯದೆ ಹೋದರೆ "ಕೆಲ ಪ್ರದೇಶಗಳಲ್ಲಿ" ಪ್ರಾಂತಿಕ ಸರಕಾರಗಳಿಗೆ ಅಧಿಕಾರವಹಿಸಿ ಕೊಡಬೇಕಾದೀತು; ಅಂದರೆ ಹಿಂದುಸ್ಥಾನದ ಅಖಂಡತ್ವಕ್ಕೆ ಬಾಧೆ ಬಂದೀತು— ಎಂದು ಎಚ್ಚರಿಕೆ. ಕಾಂಗ್ರೆಸ್ಸಾದರೂ ಈ ಸಂಭಾವ್ಯತೆಯನ್ನು ಮನಗಾಣಲು ತಡಮಾಡಿಲ್ಲ. ಪಂ. ಜವಾಹರಲಾಲರು, "ನಮ್ಮ ಪ್ರಗತಿಗೆ ಅಡ್ಡ ಬಂದ ಅಂತರಿಕ ತಿಕ್ಕಾಟವನ್ನೂ ಕೊನೆಗಾಣಿಸಿ ಮೊದಲಿನಿಂದ ಹೊಂಬೀಳಲು ಪ್ರಯತ್ನಿಸಬೇಕು" ಎಂದು ಹೇಳಿರುವದಲ್ಲದೆ ಘಟನಾಸಮಿತಿಯಿಂದ "ಹೊರಗುಳಿಯುವವರೆಲ್ಲರನ್ನು ಹೊಸದಾಗಿ ಆಮಂತ್ರಿಸುವೆವು. ಅಂಜಿಕೆ ಸಂಶಯಗಳನ್ನು ಬದಿಗಿಟ್ಟು ಈ ಸಂಯುಕ್ತ ಮತ್ತು ಐತಿಹಾಸಿಕ ಕಾರ್ಯದಲ್ಲಿ ಭಾಗ ವಹಿಸಲು ಎಲ್ಲರಿಗೂ ಕೇಳಿಕೊಳ್ಳುವೆವು" ಎಂದು ವಿನಂತಿ ಮಾಡಿಕೊಂಡಿದ್ದಾರೆ. ಹಿಂದುಸ್ಥಾನದ ಐಕ್ಯವನ್ನು ಸಾಧಿಸುವ ಕೊನೆಯ ಸಂಧಿಯಿಂದು ಎಂದು ಕಾಂಗ್ರೆಸ್ಸು ಮನಗಂಡಿವೆ. ಐಕ್ಯ, ಯಾದವೀಯುದ್ಧಗಳಲ್ಲೊಂದನ್ನು ಹಿಂದುಸ್ಥಾನ ಎಂದು ಆರಿಸಬೇಕಾಗಿದೆ.

### ಜಿನ್ನಾರ ಮನೋವೃತ್ತಿ ಬದಲಿಸಿದೆ?

ಮುಸ್ಲಿಂ ಲೀಗಿಗೆ ಕೊಟ್ಟಿರುವ ಬೆದರಿಕೆಯಾದರೂ ಕಡಿಮೆಯಲ್ಲ. "ಕೆಲ ಪ್ರದೇಶಗಳಲ್ಲಿ ಪ್ರಾಂತಿಕ ಸರಕಾರಗಳಿಗೆ" ಅಧಿಕಾರವನ್ನು ಒಪ್ಪಿಸಬಹುದೆಂಬ ಕಲಮಿನಿಂದ ಲೀಗು ಬೇಕಾದರೆ ಸಂತೋಷ ತಂದುಕೊಳ್ಳಬಹುದು. ಹಾಗೆ ತಂದುಕೊಳ್ಳುವ ಸಂಭವವೂ ತೋರತೊಡಗಿದೆ. ಪಾಕಿಸ್ಥಾನಕ್ಕಿಂತ ಗುಂಜಿತೂಕ ಕಡಿಮೆಯಾದುದನ್ನು ನಾವು ಸ್ವೀಕರಿಸುವದಿಲ್ಲವೆಂದು ಅವರು ಕರಾಚಿಯಲ್ಲಿ ಹೇಳಿದರು. ಆದರೆ ಕಾಲಾಂತರದಲ್ಲಿ ಅವರು ತಮ್ಮ ಅಭಿಪ್ರಾಯವನ್ನು ಬದಲಿಸಬಹುದು. ಏಕೆಂದರೆ ಪ್ರಾಂತಗಳಿಗೆ ಅಧಿಕಾರವೊಪ್ಪಿಸುವದೆಂದರೆ ಸ್ವತಂತ್ರ ಪಾಕಿಸ್ಥಾನವಲ್ಲ. ಅಸಾಮುವನ್ನಂತೂ ಅವರು ಕಳೆದುಕೊಂಡೆ ಬಿಡುವರು. ಗಡಿನಾಡಿಗೂ ಚಕ್ರಬಿದ್ದಂತೆಯೆ. ಪಂಜಾಬ ಸಿಂಧ ಬಂಗಾಲಗಳಿಂದಷ್ಟೆ ಅವರು ಸಂತುಷ್ಟರಾಗಬೇಕಾದೀತು. ಬಂಗಾಲ ಸರಕಾರದ ಆಯವ್ಯಯ ಪತ್ರಿಕೆಯಲ್ಲಿ ಈ ವರ್ಷ ೧೨ ಕೋಟಿ ಕೊರತೆ ಬಂದಿದೆ. ಅದು "ಸ್ವತಂತ್ರ"ವಾದರೆ ಕೇಂದ್ರದಿಂದ ಅದಕ್ಕೆ ದೊರೆಯುವ ಧನಸ್ರಾವ ತಪ್ಪಿಹೋಗುವದು. ಇದೂ ಸಾಲದ್ದಕ್ಕೆ ತನ್ನ ಸಂರಕ್ಷಣೆಯ ಭಾರವನ್ನು ಅದು ತಾನೇ ಹೊರಬೇಕು. ಅದು ಬಹಳ ಕಠಿನಸಾಧ್ಯವೇ ಸರಿ. ಸಾಧ್ಯವಾದರೂ ಪೂರ್ವ ಪಾಕಿಸ್ಥಾನ ವಿದೇಶಿಯರ ಕೈಗೊಂಬೆಯಾಗದಿರದು. ಜಿನ್ನಾರ ಕನಸಿನ ಪಾಕಿಸ್ಥಾನವಂತೂ ಇದಾಗಿರಲಿಕ್ಕಿಲ್ಲ ಇದೂ ಅಲ್ಲದೆ ಆಟ್ಲಿ ಶ್ವೇತಪತ್ರದಲ್ಲಿ ಮೂರನೆ ದಿಕ್ಕೊಂದಕ್ಕೂ ದಾರಿಯಿಟ್ಟುಕೊಳ್ಳಲಾಗಿದೆ ಅದೆಂದರೆ "ಜನತೆಯ ಹಿತಕ್ಕೆ ಅನುಕೂಲವಾಗುವಂಥ ಬೇರೆ ರೀತಿ." ಈ "ರೀತಿ"ಯನ್ನು ಪ್ರಯೋಗಿಸಿ ಪಂಜಾಬ ಬಂಗಾಲಗಳನ್ನು ವಿಚ್ಛೇದಿಸಿ ಮುಸ್ಲಿಮೇತರ ಬಹುಸಂಖ್ಯಾಕ ವಿಭಾಗಗಳನ್ನು "ಹಿಂದುಸ್ಥಾನ"ಕ್ಕೆ ಸೇರಿಸಿಬಿಡಲೂ ಬರುತ್ತದೆ. ಹಾಗಾದರೆ ಪಾಕಿಸ್ಥಾನಕ್ಕೆ ಸಮಾಧಿ ದೊರೆತಂತೆಯೆ ಸೈ. ತಾವು ಹಟಮಾರಿಗಳಾದರೆ ಇಂಥ ಗಂಡಾಂತರವೊದಗಬಹುದೆಂದು ಜಿನ್ನಾರಿಗೆ ಈಗಾಗಲೆ ಅನಿಸಿರಲಿಕ್ಕೆ ಸಾಕು. ಮೊನ್ನೆ ಸಿಂಧ ಶಾಸನ ಸಭೆಯ ಕಾರ್ಯಕಲಾಪಗಳನ್ನು ನಿರೀಕ್ಷಿಸಿ ಬಂದು ಅವರು ಲೀಗ ಸದಸ್ಯರ ಕಿವಿಯನ್ನು ಚನ್ನಾಗಿ ಹಿಂಡಿದರೆಂದು ತಿಳಿಯುತ್ತದೆ. ಸಿಂಧ ವಿಶ್ವವಿದ್ಯಾಲಯ ಮಸೂದೆಯನ್ನು ಶಾಸನಸಭೆಯಲ್ಲಿ ಮುಸ್ಲಿಂಲೀಗಿನ "ಪಾಶವಿ ಬಹುಮತ"ದಿಂದ ಸಾಗಿಸಿಕೊಂಡು ಹೋಗಿ ಕೆಲ ಸದಸ್ಯರು ಅಲ್ಪಸಂಖ್ಯಾಕರನ್ನು ಟೀಕಿಸುವ ಭಾಷಣ ಮಾಡಿದ್ದು ಪಾಕಿಸ್ಥಾನದ ಕಾರಣಕ್ಕೆ ಉಪಕಾರಿಯಾಗದೆಂದು ಅವರು ಹೇಳಿದರು. ಈ ಛೀಮಾರಿಯ ಫಲವಾಗಿ ವಿರೋಧಿ ಪಕ್ಷದವರ ಅಭಿಪ್ರಾಯಕ್ಕೆ ಬೆಲೆ ಕೊಡುವ ಮನೋವೃತ್ತಿ ಮರುದಿನ ಸರಕಾರಿ ಸದಸ್ಯರಲ್ಲಿ ಕಂಡುಬಂತು. ಈ ಬಗೆಯ ಸೌಹಾರ್ದ ಮನೋವೃತ್ತಿಯನ್ನೇ ಅವರು ಅನುಸರಿಸಿ ಬ ಮತ್ತು ಕ ಗುಂಪಿನ ಸಂಶಯಗ್ರಸ್ತ ಪ್ರಾಂತಗಳಿಗೂ ಅಲ್ಪಸಂಖ್ಯಾಕರಿಗೂ ಯೋಗ್ಯ ಆಶ್ವಾಸನ ಕೊಡಲು ಮುಂದೆ ಬಂದರೆ ಡಿಸೆಂಬರ ೬ ರ ಘೋಷಣೆಯ ಬಗ್ಗೆ ಎದ್ದ ವಾದವಿವಾದಕ್ಕೆ ವಿಶ್ರಾಂತಿ ದೊರಕಿ, ಕಾಂಗ್ರೆಸ್ಸಿನಿಂದ ಅನುಕೂಲ ಪ್ರತಿಕ್ರಿಯೆ ಬಂದು, ಘಟನಾ ಸಮಿತಿಯಲ್ಲಿ ಲೀಗಿನ ಪ್ರವೇಶದ ದಾರಿ ಸರಳವಾದೀತು. ಅಲ್ಲದೆ ಟೋರಿ ಸದಸ್ಯರ ಕಿಡಿಗೇಡಿ ಪ್ರಶ್ನೆಗಳಿಂದ ಉರಿದೆದ್ದ ಆಟ್ಲಿಯವರು ನಿಶ್ಚಿತ ದಿನ ಗೊತ್ತುಪಡಿಸಿದ್ದನ್ನು ಸಮರ್ಥಿಸಿಕೊಳ್ಳುತ್ತ ಪರಿಸ್ಥಿತಿ ಅನಿಶ್ಚಿತವಿದ್ದರೆ "ಹೀಗೇ ಹೋತಾಡುತ್ತ ಕೂಡಬಹುದೆಂದು ಕೆಲವರು ಭಾವಿಸಿದಂತಿದೆ" ಎಂದು ಹೇಳಿಲ್ಲವೆ? ಜೋತಾಡುತ್ತ ಕೂಡುವ ಮನೋವೃತ್ತಿ ಹಿಂದುಸ್ಥಾನದಲ್ಲಿ ಯಾರದೆಂಬುದು ಎಲ್ಲರಿಗೂ ಗೊತ್ತು. ಬ್ರಿಟಿಶ ಸರಕಾರದ ಮುಖ ಎತ್ತ ತಿರುಗಿದೆಯೆಂದು ಜಿನ್ನಾಸಾಹೇಬರಿಗೆ ಇದರಿಂದ ಗೊತ್ತಾಗಿರಬಹುದು. ಆದರೆ ಅವರೊಳ್ಳೆ ಚಾಣಾಕ್ಷರು. ಅವಸರಪಡುವವರಲ್ಲ. ಲಾರ್ಡ್ಸ ಮತ್ತು ಕಾಮನ್ಸ ಸಭೆಗಳಲ್ಲಿ ಚರ್ಚೆ ನಡೆದಾಗ ಏನೇನು ಹೊರಡುವದೆಂದು ನೋಡಿಕೊಳ್ಳದೆ ಅವರು ಆ್ಯಟ್ಲಿ ಘೋಷಣೆಯ ಬಗ್ಗೆ ಏನೂ ಹೇಳಲು ಮುಂದೆ ಬರಲಾರರು. ಆದರೂ ಜವಾಹರರ ವಿನಂತಿ "ವಿವರಗಳಲ್ಲಿ ಸಂದಿಗ್ಧವಾಗಿದ್ದರೂ ಭಾವನೆಯಲ್ಲಿ ಅನುಕೂಲವಾಗಿದೆ"ಯೆಂದು ಲೀಗ್ ವರ್ಗಗಳು ಅಭಿಪ್ರಾಯಪಟ್ಟಿರುವದರಿಂದ ಮೇಲೆ ಲೀಗು ಎರಡೂ ದೋಣಿಗಳಲ್ಲಿ ಕಾಲಿಟ್ಟು ಮುಂದೆ ಅನುಕೂಲವಾದುದರಲ್ಲಿ ಪಯಣ ಬೆಳೆಸಲು ಹವಣಿಸಿರಬಹುದಲ್ಲವೆ ?

### ಭಯ ಸಂಶಯಗಳು

ಆಗಬೇಕಾದಂತೆ, ಬ್ರಿಟಿಶ ಸರಕಾರ ಬಯಸಿದಂತೆ, ಘಟನೆಗಳು ರೂಪುಗೊಂಡರೆ ಇದೆಲ್ಲ ಸರಿಯಾದ ತರ್ಕವಾಯಿತು. ಆದರೆ ಬ್ರಿಟಿಶ ಶ್ವೇತ ಪತ್ರದಲ್ಲಿ ಪರಿಣಾಮ ಭಯಂಕರವಾಗಬಹುದಾದಂಥ ಸಂದಿಗ್ಧಾಂಶಗಳಿಲ್ಲದಿಲ್ಲ, ಬ್ರಿಟಿಶರು ಎಲ್ಲವನ್ನೂ ವಕ್ರಬುದ್ಧಿಯಿಂದಲೆ ಮಾತಾಡುತ್ತಾರೆಂಬ ಒಂದು ಬಗೆಯ ಭಾವನೆ ಬೇರೂರಿದವರು ಈ ಘೋಷಣೆಯಿಂದ ಆಟ್ಲಿಯವರು ಹಿಂದೀಯರನ್ನು ಹೆದರಿಸಿ ಶರಣಾಗತರಾಗಿ ಮಾಡ ಹೊರಟಿದ್ದಾರೆಂದು ಹೇಳುವದೊತ್ತಟ್ಟಿಗಿರಲಿ ಇಂದು ಹಿಂದುಸ್ಥಾನದಲ್ಲಿ ಹೊಣೆಗೆ ಹೆದರಿ ಹಿತ್ತಲ ಬಾಗಿಲಿಂದ ಓಡಿ ಹೋಗುವರಾರೂ ಇಲ್ಲ. ಆದರೆ ಟೋರಿ ಕುತಂತ್ರಕ್ಕೆ ಬಲಿಬಿದ್ದು ಘೋಷಣೆಯಲ್ಲಿರುವ ಅಂಶಗಳ ಪ್ರಯೋಜನ ಪಡೆದು ಹಿಂದುಸ್ಥಾನದಲ್ಲಿರುವ ಚಿಕ್ಕ—ದೊಡ್ಡ ಬೇರೆ ಬುದ್ಧಿಯವರು ಬೇಳೆಬೇಯಿಸಿಕೊಳ್ಳಲು ಹೆಣಗಬಹುದೆಂಬ ಭಯಮಾತ್ರ ಸಪ್ರಮಾಣವಾದುದು. ಪ್ರಾಂತಗಳಿಗೆ ಅಧಿಕಾರವೊಪ್ಪಿಸುವ ಮಾತು, ಹಿಂದುಸ್ಥಾನಕ್ಕೆ ಅತ್ಯವಶ್ಯವೆಂದು ಮಂತ್ರಿತ್ರಯವೇ ಹೇಳಿದ ಅಖಂಡತ್ವದ ಸಿದ್ಧಿಗೆ ಹಿತಾವಹವಾದುದಲ್ಲವೆಂದು ಹೇಳದೆ ವಿಧಿಯಿಲ್ಲ. ಮಂತ್ರಿತ್ರಯ ಘೋಷಣೆಯಲ್ಲಿ ಹೇಳಿದಂತೆ ಇಲ್ಲಿಯೂ ಪಾಕಿಸ್ಥಾನದ ಅಸಂಭಾವ್ಯತೆಯನ್ನು ಒತ್ತಿಹೇಳದೆ ಹೋದುದು ಸಂಶಯಕ್ಕೆ ಕಾರಣವಾಗಿದೆ. ಈ ಘೋಷಣೆಯ ಲಾಭ ಪಡೆಯಲು ಪ್ರತಿಗಾಮಿಗಳು ಸಮರ್ಥರಾದರೆ ಹಿಂದುಸ್ಥಾನದಲ್ಲಿ ಬರಿ ಮೂರು "ಸ್ಥಾನ" ಗಳಲ್ಲ ನೂರಾರು ಸ್ಥಾನಗಳು ತಲೆಯೆತ್ತಿ ಐಕ್ಯದ ಬದಲು ಕೋಲಾಹಲವೆಬ್ಬಿಸುವ ಗಂಡಾಂತರವುಂಟು. ಲಾರ್ಡ್ಸ ಚರ್ಚೆಯ ಕಾಲಕ್ಕೆ ಭಾರತ ಮಂತ್ರಿ ಲಾರ್ಡ ಪೆಥಿಕ್ ಲಾರೆನ್ಸರು ಎಷ್ಟೇ ಸದುದ್ದೇಶದಿಂದಿರಲಿ, ಈ ಘೋಷಣೆಯಲ್ಲಿ ಪಾಕಿಸ್ಥಾನದ ರಚನೆಗೆ ಅನುಕೂಲವಾದ ಅಂಶಗಳಿವೆಯೆಂದು ಲೀಗಿನವರು ಕಾಣಬಹುದು, ಎಂದುದರಿಂದ ಈ ಗಂಡಾಂತರ ಇನ್ನಷ್ಟು ಹೆಚ್ಚಾಗಿದೆ. ಸಂಸ್ಥಾನಗಳೂ ಈ ಸಂದಿಗ್ಧತೆಯ ಪ್ರಯೋಜನ ಪಡೆಯಲೆಳಸಬಹುದು. ಘಟನಾ ಸಮಿತಿಗೂ ಸಂಸ್ಥಾನಿಕರಿಗೂ ಪ್ರಾಥಮಿಕ ಒಪ್ಪಂದವಾಗಿರುವದರಿಂದ ಈ ಭಯ ಕಡಿಮೆಯಾಗಿದೆ ನಿಜ ಅಲ್ಲದೆ ಸಂಸ್ಥಾನಿಕರೂ ಬ್ರಿಟಿಶ ಘೋಷಣೆಯ ಗಂಭೀರತೆಯನ್ನರಿತು ಹೆಚ್ಚು ಹೊಣೆಗಾರಿಕೆಯ ಮಾತಾಡತೊಡಗಿದ್ದು ಸಂತೋಷಕರ. "ಈಗ ಸಂಸ್ಥಾನಗಳಿಗೆ ನೂತನ ಹಿಂದುಸ್ಥಾನದ ರಚನೆಯಲ್ಲಿ ಮಹತ್ವದ ಭಾಗ ವಹಿಸುವ ಅವಕಾಶವೊದಗಿದೆ" ಎಂದು ನರೇಂದ್ರ ಮಂಡಲದ ಚಾನ್ಸಲರರಾದ ಭೋಪಾಲ ನವಾಬರು ಹೇಳಿದ್ದಾರೆ. ತಿರ್ವಾಂಕೂರು ದಿವಾಣರಾದ ಸರ್ ಸಿ. ಪಿ. ರಾಮಸ್ವಾಮಿಯವರಂತೂ ಬ್ರಿಟಿಶ ಘೋಷಣೆ "ಅದ್ಭುತ"ವೆಂದು ಹೇಳಿ ೬೦೦ ಸಂಸ್ಥಾನಗಳನ್ನು ಹತ್ತು ಸಂಸ್ಥಾನಗಳಾಗಿ ಸಂಘಟಿಸಿ ಬ್ರಿಟಿಶ ಹಿಂದುಸ್ಥಾನದೊಡನೆ ಸಹಕರಿಸಲನುಮಾಡಬೇಕೆಂದಿದ್ದಾರೆ. ಬಲಿಷ್ಠ ಕೇಂದ್ರದ ಅವಶ್ಯಕತೆಯೂ ಅವರಿಗೆ ಮನಗಂಡಿದೆ ಅಂತೂ ಸಂಸ್ಥಾನಗಳು ಮಂತ್ರಿತ್ರಯ ಯೋಜನೆಗೆ ಅಡ್ಡಗಾಲಿಕ್ಕುವ ಭಯ ಅಲ್ಪ.

ಈ ಘೋಷಣೆಯ ಬಗ್ಗೆ ಇನ್ನೊಂದು ಸಂಶಯವನ್ನೆತ್ತಲಾಗಿತ್ತು. ಇದರಿಂದ ಘಟನಾ ಸಮಿತಿಯನ್ನು ಕೊಂದಂತೆಯೆ ಸರಿಯೆಂದು ಹೇಳುವವರಿದ್ದಾರೆ. ಒಡನೆಯೆ ಹಿಂದೀಯರೊಡನೆ ಅಧಿಕಾರದಾನಕ್ಕಾಗಿ ಸಂಧಾನ ವಹಿಸುವದಾಗಿ ಬ್ರಿಟಿಶರು ಸಾರಿದ್ದರಿಂದ ಈ ಸಂಶಯಕ್ಕೆಡೆಯಾಗಿದೆ. ಆದರೆ ಘಟನಾ ಸಮಿತಿಯ ಕಾರ್ಯ ಯಥಾಪ್ರಕಾರ ಸಾಗುವದೆಂದು ಖಚಿತವಾಗಿ ತಿಳಿಯುತ್ತದೆ. ಅಲ್ಲದೆ ಲಾರ್ಡ್ಸ ಸಭೆಯಲ್ಲಿ ಪೆಥಿಕ ಲಾರೆನ್ಸರು ಅಲ್ಪಸಂಖ್ಯಾಕರ ಹಿತರಕ್ಷಣೆಯ ಬಗ್ಗೆ ಘಟನಾ ಸಮಿತಿ ಯೋಜಿಸಿದ ಕ್ರಮಗಳ ಬಗ್ಗೆ ಸಂತೋಷ ಸೂಚಿಸಿದ್ದಾರೆ.

### ಲಾರ್ಡ್ಸ "ಚರ್ಚೆ"

ಲಾರ್ಡ್ಸ ಸಭೆಯಲ್ಲಿ ಹಿಂದೀ ಪ್ರಶ್ನೆಯ ಚರ್ಚೆ ಎರಡು ದಿನ ನಡೆಯಿತು. ಟೋರಿ ಧುರೀಣ ಲಾರ್ಡ ಟೆಂಪಲ್‌ವುಡ್ಡರು (ಹಿಂದೆ ಸರ್ ಸಾಮ್ಯುಯೆಲ ಹೋರರು) ಅಲ್ಪ ಸಂಖ್ಯಾಕರ ಹಿತ ರಕ್ಷಣೆಗೆ ಏನೂ ವ್ಯವಸ್ಥೆ ಮಾಡದೆ ಹೊರಟು ಹೋಗುವ ದಿನ ಗೊತ್ತುಪಡಿಸಿದ್ದರಿಂದ ಹಿಂದುಸ್ಥಾನದ ಶಾಂತಿಗೆ ಧಕ್ಕೆ ಬರುವ ಸಂಭವವುಂಟೆಂದು ಒಂದು ಗೊತ್ತುವಳಿ ಮಂಡಿಸಿದರು. ಟೋರಿ ಪ್ರತಿಗಾಮಿಗಳ ವಾದದ ತಿರುಳಿಲ್ಲದ ತಿರುಳು ಇಷ್ಟೇ ಇತ್ತು: ಈ ಘೋಷಣೆ ಮುಂತಾದ್ದು ಬ್ರಿಟಿಶ ವಾಗ್ದಾನಗಳಿಗೆ ವಿರುದ್ಧವಾಗಿದೆ ಅಲ್ಪಸಂಖ್ಯಾಕರ ಸಂರಕ್ಷಣೆಯ ವ್ಯವಸ್ಥೆ ಮಾಡಿಲ್ಲ. ಹಿಂದೀಯರಲ್ಲಿ ಒಗ್ಗಟ್ಟಾಗದೆ ಅಧಿಕಾರದಾನ ಮಾಡಬಾರದಿತ್ತು. ೧೬ ತಿಂಗಳ ಅವಧಿ ಅಧಿಕಾರ ವರ್ಗೀಕರಣಕ್ಕೆ ಏನೂ ಸಾಲದು. ಇದರಿಂದ ಹಿಂದುಸ್ಥಾನದಲ್ಲಿ ಯಾದವೀ ಯುದ್ಧ ಅಶಾಂತಿ ತಲೆದೋರಿ ಹಿಂದೀಯರಿಗೆ ಅಮಿತ ಹಾನಿಯಾಗುವದು. ಇತ್ಯಾದಿ. ಲಿಬರಲ್

—೧೩ನೇ ಪುಟಕ್ಕೆ

# ಸಂಪಾದಕೀಯ ಟೀಕಟಿಪ್ಪಣಿಗಳು

## ಮುಂಬಯಿ ಮುಂಗಡ ಪತ್ರಿಕೆ

ಮುಂಬಯಿ ಸರಕಾರದ ಅರ್ಥಸಚಿವರಾದ ವೈಕುಂಠಲಾಲ ಮೇಥಾರವರು ಮುಂಗಡ ಪತ್ರಿಕೆಯನ್ನು ೨೪ನೇ ತಾರೀಕು ಮಂಡಿಸಿರುವರು. ಅದರ ಮುಖ್ಯಾಂಶವನ್ನು ಇದೇ ಸಂಚಿಕೆಯಲ್ಲಿ ಬೇರೆ ಕಡೆ ಕೊಟ್ಟಿದ್ದೇವೆ. ಯುದ್ಧೋತ್ತರ ಯೋಜನೆ ಕೈಕೊಳ್ಳುವ ಕಾಲದ ಮುಂಗಡಪತ್ರವೆಂದರೆ ಕರಭಾರದಿಂದ ತುಂಬಿದ ಮುಂಗಡ ಪತ್ರಿಕೆಯೆಂದು ಅನೇಕರಿಗೆ ಎನಿಸಬಹುದು. ಆದರೆ ನಮ್ಮ ಅರ್ಥಸಚಿವರು ವ್ಯವಹಾರ ಕುಶಲತೆಯಿಂದ ಮುಂಗಾಣಿಯನ್ನು ಸಿದ್ಧಮಾಡಿ ಹೊಸ ಕರಗಳನ್ನೇನೂ ಹೇರದೆ ಆರು ಲಕ್ಷ ರೂ.ಗಳಷ್ಟು ಉಳಿತಾಯವನ್ನೆ ತೋರಿಸಿರುವರು. ಹೊಸ ವರ್ಷದ ಮುಂಗಾಣಿಯಲ್ಲಿ ೩೮ ಕೋಟಿ ೯೦ ಲಕ್ಷದಷ್ಟು ರೂಪಾಯಿ ಆಯ ಹಿಡಿದಿದ್ದು ೩೮ ಕೋಟಿ ೬೫ ಲಕ್ಷ ರೂಪಾಯಿ ವೆಚ್ಚವನ್ನು ಹಿಡಿಯಲಾಗಿದೆ. ಪ್ರಜಾಪ್ರಭುತ್ವ ಸರಕಾರದ ಈ ಅಡಸಟ್ಟಿಯಲ್ಲಿ ಜನತೆಯ ಸಾರ್ವಾಂಗಿಕ ಹಿತದ ಅನೇಕ ವಿಷಯಗಳಿಗಾಗಿ ಹೆಚ್ಚು ಹಣ ತೆಗೆದಿಟ್ಟದ್ದು ಅಭಿನಂದನೀಯವಾಗಿದೆ. ಮುಖ್ಯವಾಗಿ ಪ್ರಾಂತದ ಆಹಾರ ಕೊರತೆಯನ್ನು ನೀಗಿಸಲು ಮಾನ್ಯ ಮಂತ್ರಿಗಳು ಒಕ್ಕಲತನದ ಅಭಿವೃದ್ಧಿಗಾಗಿ ಅನೇಕ ಯೋಜನೆಗಳನ್ನು ಮಾಡಿದ್ದಾರೆ ಇದಕ್ಕಾಗಿ ಹಣದ ಏರ್ಪಾಡನ್ನು ಮಾಡಿದ್ದಾರೆ. ಒಕ್ಕಲತನದ ಅಭಿವೃದ್ಧಿಗಾಗಿ ಹಿಂದಿನ ಸರಕಾರ ೧ ಕೋಟಿ ೩೫ ಲಕ್ಷ ರೂಪಾಯಿ ವೆಚ್ಚ ಮಾಡುತಿದ್ದರೆ ಈ ಸಲದ ಮುಂಗಡ ಪತ್ರಿಕೆಯಲ್ಲಿ ೩ ಕೋಟಿ ೬೫ ಲಕ್ಷ ರೂಪಾಯಿಗಳನ್ನು ಇದಕ್ಕಾಗಿ ತೆಗೆದಿಟ್ಟದ್ದಾರೆ. ಹಿಂದಿನ ಸರಕಾರ ಹೆಚ್ಚು ಹಣವನ್ನು ಒಕ್ಕಲತನದ ಅಭಿವೃದ್ಧಿಗಾಗಿ ವೆಚ್ಚ ಮಾಡುತಿದ್ದರೂ ಹೇಳಿಕೊಳ್ಳುವಷ್ಟು ಅಭಿವೃದ್ಧಿ ಮಾತ್ರ ಆದಿಸೆಯಲ್ಲಿ ಆದುದು ಕಂಡು ಬಂದಿಲ್ಲೆಂದು ವಿಷಾದದಿಂದ ಹೇಳಬೇಕಾಗುತ್ತದೆ. ಒಕ್ಕಲಿಗರನ್ನು ವಿಶ್ವಾಸದಲ್ಲಿ ತೆಗೆದುಕೊಂಡು ಅವರ ಸಹಕಾರದಿಂದಲೆ ಒಕ್ಕಲತನ ಶಾಖೆಯ ಅಧಿಕಾರಿಗಳು ಹುಟ್ಟುವಳಿ ಯೋಜನೆಯ ಕಾರ್ಯ ಕೈಕೊಂಡರೆ ಹೆಚ್ಚು ಉಪಯುಕ್ತವಾಗುವದು. ಈ ಬಗ್ಗೆ ಸರಕಾರದವರು ಹೆಚ್ಚು ಗಮನಕೊಡುವದವಶ್ಯವಾಗಿದೆ. ಜನತೆಗೆಮುಖ್ಯವಾಗಿ ಬೇಕಾದ ಆಹಾರ ಮತ್ತು ಬಟ್ಟೆಯ ಕೊರತೆ ಇಲ್ಲದಂತೆ ಮಾಡುವದು ಸರಕಾರದ ಪ್ರಥಮ ಕರ್ತವ್ಯವಾಗಿದೆ. ಸದ್ಯದಲ್ಲಿಯಂತೂ ಜನತೆ ಇವೆರಡರ ಕೊರತೆಯಿಂದ ಬಳಲುತಿದೆ. ಕಾಂಗ್ರೆಸ್ ಸರಕಾರ ಬಂದರೂ ತಮ್ಮ ಬವಣೆ ತಪ್ಪಲಿಲ್ಲೆಂದು ಕೊರಗುತಿದೆ. ಬರುವ ವರ್ಷದಲ್ಲಾದರೂ ಕಾಂಗ್ರೆಸ್ ಸರಕಾರದವರು ಜನತೆಯ ಈ ಮುಖ್ಯ ಕೊರತೆಗಳನ್ನು ಹೋಗಲಾಡಿಸಲು ಸಮರ್ಥರಾಗಲೆಂದು ಆಸಿಸುತ್ತೇವೆ. ಈ ಸಲದ ಅಂದಾಜ ಪತ್ರಿಕೆಯಲ್ಲಿ ಶಿಕ್ಷಣಕ್ಕಾಗಿ ಹೆಚ್ಚು ಹಣವನ್ನು ತೆಗೆದಿಟ್ಟದ್ದು ಅಭಿನಂದನೀಯವಾಗಿದೆ. ಆಹಾರ ಬಟ್ಟೆಯ ನಂತರ ಜ್ಞಾನಪ್ರಸಾರವೆ ಮುಖ್ಯವಾದುದು. ಈ ರೀತಿ ವಿಚಾರ ಮಾಡಿದರೆ ಶ್ರೀ ವೈಕುಂಠಲಾಲರು ಒಳ್ಳೆ ಜಾಣ್ಮೆಯಿಂದ ಮುಂಗಾಣಿಯನ್ನು ಸಿದ್ಧಪಡಿಸಿ ಅಭಿನಂದನೆಗೆ ಪಾತ್ರರಾಗಿರುವರು.

## ಕರ್ನಾಟಕದ ಯೋಜನೆಗಳು

ಈ ಮುಂಗಾಣಿಯಲ್ಲಿ ಕರ್ನಾಟಕದ ಯೋಜನೆಗಳನ್ನೂ ಅಲಕ್ಷಿಸಿಲ್ಲೆಂದು ಸಂತೋಷದಿಂದ ಹೇಳಬೇಕಾಗುತ್ತಿದೆ. ಅತ್ಯಂತ ಮಹತ್ವದ ಸಂಗತಿಯೆಂದರೆ ೧೯೫೦ರಲ್ಲಿ ಕರ್ನಾಟಕದಲ್ಲಿ ಪ್ರತ್ಯೇಕ ವಿಶ್ವವಿದ್ಯಾಲಯ ಸ್ಥಾಪಿಸುವ ವ್ಯವಸ್ಥೆಯಿದ್ದು ಅದಕ್ಕಾಗಿ ೮ಲಕ್ಷ ರೂಪಾಯಿ ಅನಾವರ್ತ ವೆಚ್ಚ ಮತ್ತು ವರ್ಷಕ್ಕೆ ೪ ಲಕ್ಷ ರೂಪಾಯಿ ಆವರ್ತ ವೆಚ್ಚದ ಏರ್ಪಾಡು ಮಾಡಲಾಗಿದೆ. ಧಾರವಾಡದಲ್ಲಿ ಸ್ಥಾಪಿತವಾಗುವ ಒಕ್ಕಲತನ ಕಾಲೇಜಿಗಾಗಿಯೂ ಏರ್ಪಾಡು ಮಾಡಲಾಗಿದೆ. ಕರ್ನಾಟಕದಲ್ಲಿ ಖಾಸಗಿ ಎಂಜಿನಿಯರಿಂಗ ಕಾಲೇಜೊಂದು ಸ್ಥಾಪಿತವಾಗಲಿದ್ದು ಅದಕ್ಕಾಗಿ ಸರಕಾರದವರು ೫೦ ಸಾವಿರ ರೂ. ಸಹಾಯ ಕೊಡಲು ಸಿದ್ಧರಾಗಿರುವರು. ಕರ್ನಾಟಕವನ್ನು ಸಮೃದ್ಧ ಮಾಡುವ ದೃಷ್ಟಿಯಿಂದ ನೀರಾವರಿ ಯೋಜನೆ ಅತ್ಯವಶ್ಯವಿದ್ದು ಪದ್ದೀ ಯೋಜನೆಯ ಹೆಚ್ಚಿನ ಪರಿಶೀಲನೆ ಕೈಕೊಳ್ಳಲು ಈ ವರ್ಷ ೧ ಲಕ್ಷ ರೂಪಾಯಿ ತೆಗೆದಿಡಲಾಗಿದೆ. ಪರಿಶೀಲನೆಯ ನಂತರ ಯಾವದೇ ಕಾರಣದಿಂದ ಯೋಜನೆಯನ್ನು ಬಿಟ್ಟುಕೊಡದಂತೆ ನೋಡಿಕೊಳ್ಳುವದು ಸರಕಾರದ ಕರ್ತವ್ಯವಾಗಿದೆ. ಧಾರವಾಡ ಹುಬ್ಬಳ್ಳಿಗಳಿಗೆ ನೀರು ಪೂರಯಿಸುವದಕ್ಕಾಗಿ ನೀರಸಾಗರ ಯೋಜನೆಗೆ ೧೨ ಲಕ್ಷ ರೂಪಾಯಿಗಳನ್ನು ತೆಗೆದಿಡಲಾಗಿದೆ. ಹುಬ್ಬಳ್ಳಿಯಲ್ಲಿ ಕೂಲಿಕಾರರಿಗಾಗಿ ಹಿತರಕ್ಷಣ ಕೇಂದ್ರವನ್ನು ತೆರೆಯಲಾಗುವದು. ವಿಜಾಪೂರ ಹುಬ್ಬಳ್ಳಿಗಳಲ್ಲಿ ತಾಂತ್ರಿಕ ಶಾಲೆಗಳನ್ನು ತೆರೆಯಲಾಗುವದು. ಹಳ್ಳಿಗಳಲ್ಲಿ ಕುಡಿಯುವ ನೀರಿನ ವ್ಯವಸ್ಥೆಗಾಗಿ ಬಾವಿಗಳನ್ನು ಕಡಿಸಲು ಹಣದ ಏರ್ಪಾಡುಮಾಡಲಾಗಿದೆ. ಸರಕಾರದವರು ಈ ಸಲದ ಅಂದಾಜಪತ್ರಿಕೆಯಲ್ಲಿ ಈ ರೀತಿ ಕರ್ನಾಟಕದ ವಿಶಿಷ್ಟ ಬೇಡಿಕೆಗಳನ್ನನುಲಕ್ಷಿಸಿ ಹಣದ ಏರ್ಪಾಡು ಮಾಡಿದ್ದು ಯೋಗ್ಯವೆ ಆಗಿದೆ. ಹಿಂದುಳಿದ ಕರ್ನಾಟಕದ ದೃಷ್ಟಿಯಿಂದ ಈಗ ಮಾಡಿದ ಏರ್ಪಾಡು ಸಾಕಷ್ಟಿಲ್ಲದಿದ್ದರೂ ಕಾಂಗ್ರೆಸ್‌ಮಂತ್ರಿಗಳು ಅತ್ತಗಮನಿಸಿದ್ದು ಪ್ರಶಂಸನೀಯವಾಗಿದೆ. ಆದರೆ ಆಯತ್ತ ಸಮಯದಲ್ಲಿ ಏನೇನೋ ಕಾರಣಗಳನ್ನು ಮುಂದೆ ಮಾಡಿ ಸರಕಾರದವರು ಕರ್ನಾಟಕದ ಬೇಡಿಕೆಗಳನ್ನು ಹಿಂದಕ್ಕೊತ್ತದಂತೆ ನೋಡಿಕೊಳ್ಳುವುದು ಕರ್ನಾಟಕ ಸದಸ್ಯರ ಕರ್ತವ್ಯ ಆಗಿದೆ. ಸರಕಾರದವರು ಕೈಕೊಳ್ಳುವ ಕಾರ್ಯಗಳಲ್ಲಿ ಜನತೆಯ ಸಹಕಾರ ಸಿಕ್ಕು ಅವು ಯಶಸ್ವಿಯಾಗಲೆಂದು ಹಾರಯಿಸುತ್ತೇವೆ.

## ೧೯೪೮ ಜೂನದಲ್ಲಿ 'ಚಲೇಜಾವ'

ಕಳೆದ ಸಂಚಿಕೆಯಲ್ಲಿ ಸೂಚಿಸಿದಂತೆ ಬ್ರಿಟಿಶ ಮುಖ್ಯಮಂತ್ರಿಗಳು ಕಳೆದ ಶುಕ್ರವಾರ ಘೋಷಣೆಯೊಂದನ್ನು ಮಾಡಿ ೧೯೪೮ ಜೂನದೊಳಗಾಗಿ ಹಿಂದುಸ್ತಾನದ ಆಡಳಿತೆಯನ್ನು ಭಾರತೀಯರಿಗೆ ಒಪ್ಪಿಸಿ 'ಚಲೇಜಾವ' ಮಾರ್ಗವನ್ನನುಸರಿಸುವುದಾಗಿ ಸಾರಿರುವರು. ಅವರ ಘೋಷಣೆಯನ್ನು ನಮ್ಮ ಕಳೆದ ಸಂಚಿಕೆಯಲ್ಲಿಯೆ ವಿವರಿಸಿದ್ದೇವೆ. ಮುಖ್ಯ ಮಂತ್ರಿಗಳ ಘೋಷಣೆ ಬಹ್ವಂಶದಿಂದ ಪ್ರಗತಿಪರವಾಗಿದೆಂದು ಹೇಳಬಹುದು. ಕಾಂಗ್ರೆಸು ಮತ್ತು ಇತರರು ಅನೇಕ ಸಲ ಕೇಳಿಕೊಂಡಂತೆ ಸರಕಾರದವರು ಅಧಿಕಾರ ತ್ಯಾಗದ ನಿರ್ದಿಷ್ಟ ಅವಧಿಯನ್ನು ಹೇಳಿಬಿಟ್ಟಿರುವರು. ಅಷ್ಟರೊಳಗಾಗಿ ಹಿಂದುಸ್ತಾನದಲ್ಲಿನ ಪಕ್ಷಪಂಗಡಗಳು ಐಕಮತ್ಯಮಾಡಿಕೊಂಡು ಘಟನೆಯನ್ನು ರಚಿಸಕೊಳ್ಳಬೇಕೆಂದೂ ಸೂಚಿಸಿದ್ದಾರೆ. ಅಷ್ಟರೊಳಗಾಗಿ ಸುಭದ್ರ ಕೇಂದ್ರ ಸರಕಾರ ಸ್ಥಾಪಿತವಾಗದಿದ್ದರೆ, ಆಗ ಅಸ್ತಿತ್ವದಲ್ಲಿದ್ದ ಕೇಂದ್ರ ಸರಕಾರಕ್ಕೊ ಪ್ರಾಂತಿಕ ಸರಕಾರಗಳಿಗೊ ಅಧಿಕಾರವನ್ನೊಪ್ಪಿಸಿ ಬಿಡುವುದಾಗಿ ಸಾರಿದ್ದಾರೆ. ಈ ಪರಿಸ್ಥಿತಿಯಲ್ಲಿ ಹಿಂದುಸ್ತಾನದಲ್ಲಿನ ಪಕ್ಷಗಳಲ್ಲಿ ಒಡಂಬಡಿಕೆಯಾಗುವದವಶ್ಯವಾಗಿದೆ. ಬ್ರಿಟಿಶರು ಕೊಟ್ಟ ನಿರ್ದಿಷ್ಟಕಾಲದ ಈ ಸೂಚನೆ ಒಂದು ಬಗೆಯಿಂದ ಆಹ್ವಾನದಂತೆ ಇದೆ. ಈ ಆಹ್ವಾನವನ್ನು ಸ್ವೀಕರಿಸಿ ಐಕ್ಯಮಾಡಿಕೊಂಡು ಸರಕಾರಕ್ಕೆ ಉತ್ತರ ಕೊಡುವದು ಜನರ ಕರ್ತವ್ಯವಾಗಿದೆ. ಹಿಂದೀಯರು ಇದರಲ್ಲಿ ಅಯಶಸ್ವಿಯಾದರೆ ಅವರೆಂದಿಗೂ ಜಾಗ್ರತರಾಗಲಾರರು. ಹಿಂದುಸ್ತಾನದ ಸ್ವಾತಂತ್ರ್ಯ ಕನಸಿನ ಗಂಟಿ ಆಗಬಲ್ಲದು. ಘಟನಾ ಸಮಿತಿಯ ಕಾರ್ಯ ಅನಿರ್ಬಂಧ ಸಾಗಲೆಬೇಕು. ಸಂಸ್ಥಾನಿಕರೂ ಅದರಲ್ಲಿ ಸೇರಬೇಕೆಂದು ನಿರ್ಧರಿಸಿದ್ದಾರೆ. ಈಗ ಮುಸ್ಲಿಂ ಲೀಗು ಮಾತ್ರ ಘಟನಾ ಸಮಿತಿಗೆ ಬಹಿಷ್ಕಾರ ಹಾಕಿದೆ; ಆದುದರಿಂದ ಮುಸ್ಲಿಂಲೀಗಿನವರೂ ಬಹಿಷ್ಕಾರದ ತಮ್ಮ ನಿರ್ಣಯವನ್ನು ಹಿಂತೆಗೆದುಕೊಂಡು ಘಟನಾ ಸಮಿತಿಯ ಕಾರ್ಯದಲ್ಲಿ ಭಾಗವಹಿಸಬೇಕು. ಹಿಂದುಸ್ತಾನದ ಹೊಸ ಘಟನೆಯಲ್ಲಿ ಅಲ್ಪಸಂಖ್ಯಾಕರ ಹಕ್ಕುಬಾಧ್ಯತೆಗಳಿಗಾಗಿ ಬೇಕಾದಷ್ಟು ಸಂರಕ್ಷಣೆಗಳನ್ನೂ ಕೊಡಬಹುದು. ಬ್ರಿಟಿಶರು ಅಧಿಕಾರ ತ್ಯಾಗಮಾಡಲು ಮುಂದೆ ಬಂದಾಗ ಭಾರತೀಯರು ಅದನ್ನು ಸ್ವೀಕರಿಸಲಿಲ್ಲೆಂದು ಜಗತ್ತಿನಲ್ಲೆಲ್ಲ ಅಪವಾದಕ್ಕೆ ಗುರಿಯಾಗದಂತೆ ಹಿಂದೀಯರು ನೋಡಿಕೊಳ್ಳಬೇಕಾಗಿದೆ. ಬ್ರಿಟಿಶ್ ಸರಕಾರದ ಈ ಘೋಷಣೆಯಲ್ಲಿ ಬೇರೆ ಅನೇಕ ಲೋಪದೋಷಗಳು ಅಸಂದಿಗ್ಧತೆಗಳಿದ್ದರೂ ಅಧಿಕಾರ ತ್ಯಾಗದ ನಿರ್ದಿಷ್ಟ ದಿನವನ್ನು ಸಾರಿಬಿಟ್ಟದ್ದರಿಂದ ಅದು ಸ್ವಾಗತಾರ್ಹವಾಗಿದೆ.

## ಹೊಸ ವೈಸರಾಯರು

ಈ ಘೋಷಣೆಯ ಕಾಲಕ್ಕೇ ಚಕ್ರವರ್ತಿ ಸರಕಾರದವರು ಸದ್ಯದ ವೈಸರಾಯ ಲಾರ್ಡ ವೇವೆಲ್ಲರನ್ನು ನಿವೃತ್ತ ಮಾಡಿ ಲಾರ್ಡ ಮೌಂಟಬ್ಯಾಟನ್‌ರನ್ನು ವೈಸರಾಯರನ್ನಾಗಿ ನೇಮಿಸಿದ್ದಾರೆ. ಲಾರ್ಡ ವೇವೆಲ್‌ರಲ್ಲಿ ಏನೇ ಲೋಪದೋಷಗಳಿದ್ದು ಕೆಲ ಪ್ರಸಂಗಗಳಲ್ಲಿ ಹಿಂದೀ ಸ್ವಾತಂತ್ರ್ಯ ಪ್ರಗತಿಗೆ ಅವರು ಅಡ್ಡಿ ಮಾಡಿದ್ದರೂ ಅವರು ಬಹ್ವಂಶದಿಂದ ಹಿಂದುಸ್ತಾನಕ್ಕೆ ಸೇವೆ ಸಲ್ಲಿಸಿರುವರೆಂದು ಒಪ್ಪಬೇಕಾಗುವದು. ಯುದ್ಧ ಸಮಯದಲ್ಲಿ ವೈಸರಾಯರಾಗಿ ನೇಮಿಸಲ್ಪಟ್ಟಿದ್ದ ಅವರು ಆಗ ಶಾಂತಿಯನ್ನು ಕಾಯ್ದುಕೊಂಡು ಹಿಂದೂ ಮುಸಲ್ಮಾನ ಮೊದಲಾದವರಲ್ಲಿ ಐಕ್ಯ ಮಾಡಲು ತಮ್ಮ ದೃಷ್ಟಿಯಿಂದ ಪ್ರಯತ್ನಿಸಿದರು. ಅಧಿಕಾರ ತ್ಯಾಗ ಮಾಡುವ ಕಾಲಕ್ಕಾದರೂ ಅವರು ಇರಬಹುದಾಗಿತ್ತೆಂದು ಅಪೇಕ್ಷಿಸಬಹುದು. ಆದರೆ ಮಂತ್ರಿಶಿಷ್ಟರ ಘೋಷಣೆಯನ್ವಯ ನಡುಗಾಲ ಸರಕಾರವನ್ನು ರಚಿಸುವಲ್ಲಿ ವೇವೆಲ್‌ರು ಅಷ್ಟೊಂದು ಜಾಣತನದಿಂದ ವರ್ತಿಸಲಿಲ್ಲೆಂದು ಹೇಳಬೇಕಾಗುವದು. ಬ್ರಿಟಿಶ್ ಸರಕಾರದ ದೀರ್ಘಾವಧಿ ಯೋಜನೆಗೆ ಒಪ್ಪಿಸಿಕೊಂಡೇ ಕಾಂಗ್ರೆಸ್ಸನ್ನು ನಡುಗಾಲ ಸರಕಾರದಲ್ಲಿ ಸ್ಥಾನಾಪನ್ನಮಾಡಿದ ಲಾರ್ಡ ವೇವೆಲ್ಲರು ಮುಸ್ಲಿಂ ಲೀಗಿನವರಿಗೆ ಮಾತ್ರ ಹಾಗೆ ನಿರ್ಬಂಧಪಡಿಸದಿದ್ದುದರಿಂದ ಘಟನಾ ಸಮಿತಿಯನ್ನು ಅವರು ಬಹಿಷ್ಕರಿಸಿಯೂ ನಡುಗಾಲ ಸರಕಾರದಲ್ಲಿ ಉಳಿದಿರುವರು. ನಡುಗಾಲ ಸರಕಾರದಲ್ಲಿ ಸೇರುವಾಗ ಮುಸ್ಲಿಂ ಲೀಗ ಧುರೀಣರಾದ ಬ್ಯಾ. ಜಿನ್ನಾರು ಲಾರ್ಡ ವೇವೆಲ್‌ರಿಗೆ ದೀರ್ಘಾವಧಿ ಯೋಜನೆಯನ್ನು ಸ್ವೀಕರಿಸುವ ಆಶ್ವಾಸನವನ್ನು ಕೊಟ್ಟಿದ್ದರಂತೆ. ವೇವೆಲ್ಲ ಜವಾಹರಲಾಲರಲ್ಲಿ ನಡೆದ ಪತ್ರವ್ಯವಹಾರದಿಂದ ಅದು ಸಿದ್ಧವಾಗುತ್ತದೆ. ಆದರೆ ಜಿನ್ನಾ ಸಾಹೇಬರು ಅದನ್ನೊಪ್ಪಲಿಲ್ಲ. ವೈಸರಾಯ ವೇವೆಲ್‌ರು ಅಷ್ಟಕ್ಕೆ ತಣ್ಣಗಾದರು. ಇದೆಲ್ಲ ಯಾರ ಗೌಡ ಬಂಗಾಲಿಯೆಂಬುದು ಮಾತ್ರ ಈ ವರೆಗೆ ಹೊರಬಿದ್ದಿಲ್ಲ. ದೀರ್ಘಾವಧಿ ಯೋಜನೆಗೊಪ್ಪದ ಮುಸ್ಲಿಂ ಲೀಗನ್ನು ನಡುಗಾಲ ಸರಕಾರದಲ್ಲಿ ಸೇರಿಸಿಕೊಂಡುದು ವೇವೆಲ್‌ರ ಮಹಾಪರಾಧವೆಂದೇ ಹೇಳಬಹುದು. ಅದೇನೇ ಇದ್ದರೂ ಬ್ರಿಟಿಶ ಸರಕಾರ ಮತ್ತು ಲಾರ್ಡ ವೇವೆಲ್ಲರಲ್ಲಿ ಮತಭೇದವಾಗಿ ವೈಸರಾಯರು ನಿವೃತ್ತರಾದರು. ಹೊಸ ವೈಸರಾಯ ಲಾರ್ಡ ಮೊಂಟಬ್ಯಾಟನ್‌ರ ಮೇಲೆ ಇದೀಗ ಬಹಳ ಹೊಣೆ ಬಿದ್ದಿದೆ. ನಡುಗಾಲ ಸರಕಾರದಲ್ಲಿದ್ದ ಮುಸ್ಲಿಂ ಲೀಗಿನವರನ್ನು ದೀರ್ಘಾವಧಿ ಯೋಜನೆಗೊಪ್ಪಿಸುವದು ಅವರ ಕರ್ತವ್ಯವಾಗಿದೆ. ಅಂದರೇನೇ ಸರಕಾರ ನಿರ್ದಿಷ್ಟಪಡಿಸಿದ ಅವಧಿಯೊಳಗಾಗಿ ಹಿಂದುಸ್ತಾನದ ಘಟನೆ ಸಿದ್ಧವಾಗುವುದು. ಹಿಂದುಸ್ತಾನವನ್ನು ಒಡೆಯಬೇಕೆಂಬ ಲೀಗಿನವರ ಹುಚ್ಚು ವಿಚಾರವನ್ನು ಬಿಡಿಸುವದೂ ಅವರ ಕರ್ತವ್ಯವಾಗಿದೆ. ವೈಸರಾಯರು ತಮ್ಮ ಈ ಕರ್ತವ್ಯ ಮಾಡುವರೆಂದು ನಂಬುತ್ತೇವೆ.

## ಒಳ ಪಂಗಡಗಳಿಗೆ ಅರ್ಧಚಂದ್ರ

ಈ ಸಮಯದಲ್ಲಿ ಕಾಂಗ್ರೆಸ್ಸಿನ ಹೊಣೆಯೂ ಹೆಚ್ಚಿದೆ. ಕಾಂಗ್ರೆಸ್ಸು ತನ್ನ ಅಪಾರಸೇವೆ ಸ್ವಾರ್ಥತ್ಯಾಗಗಳಿಂದ ಭಾರತದಲ್ಲಿ ಒಂದು ಅಪೂರ್ವ ಸ್ಥಾನವನ್ನು ಸಂಪಾದಿಸಿದ್ದು ನಿಜ. ತತ್ಪರಿಣಾಮವಾಗಿಯೆ ಹಿಂದುಸ್ತಾನದ ೧೧ ಪ್ರಾಂತಗಳಲ್ಲಿ ೮ ಪ್ರಾಂತಗಳ ಆಡಳಿತ ಅದರ ಪ್ರತಿನಿಧಿಗಳ ಕೈಯಲ್ಲಿದೆ. ಆದರೂ ಕಾಂಗ್ರೆಸ್ಸಿನಲ್ಲಿ ಅವಶ್ಯಕ ಸಂಘಟನೆ ಇಲ್ಲ. ಆಡಳಿತದಲ್ಲಿ ಶೈಥಿಲ್ಯವುಂಟಾಗಿವೆ. ಕಾಂಗ್ರೆಸ್ಸಿನಲ್ಲಿ ಪಕ್ಷೋಪಪಕ್ಷಗಳುಂಟಾಗಿವೆ. ಒಳಪಂಗಡಗಳು ಹೆಚ್ಚಿದ್ದರಿಂದ ಪ್ರಾಂತಿಕ ಆಡಳಿತದಲ್ಲಿಯೂ ಅದರ ದುಷ್ಪರಿಣಾಮ ತೋರಹತ್ತಿದೆ. ಕಾಂಗ್ರೆಸ್ಸಿನ ಪ್ರತಿಯೊಂದು ಕಾರ್ಯದಲ್ಲಿಯೂ ಈ ಒಳಪಂಗಡಗಳು ವ್ಯತ್ಯಯವನ್ನುಂಟು ಮಾಡಹತ್ತಿವೆ. ಕೆಲ ಸಂದರ್ಭಗಳಲ್ಲಿ ಕಾಂಗ್ರೆಸ್ಸಿನ ಹೆಸರಿನಲ್ಲಿ ಜಾತೀಯ ಭೂತವು ನರ್ತನ ಮಾಡುತಿದೆ. ಇಡೀ ಹಿಂದುಸ್ತಾನದ ಆಡಳಿತ ಸೂತ್ರಗಳನ್ನು ವಹಿಸಿಕೊಳ್ಳಬೇಕಾದ ಈ ಸಮಯದಲ್ಲಿ ಕಾಂಗ್ರೆಸ್ ಆಡಳಿತದಲ್ಲಿ ಹೀಗೆ ಶೈಥಿಲ್ಯವುಂಟಾದುದು ಅಸಮಾಧಾನಕರ. ಇದನ್ನೆಲ್ಲ ತಿಳಿದುಕೊಂಡೆ ರಾಷ್ಟ್ರಪತಿ ಕೃಪಲಾನಿಯವರು ಪ್ರಾಂತಿಕ ಅಧ್ಯಕ್ಷರು, ಕಾರ್ಯದರ್ಶಿಗಳು ಮತ್ತು ಧುರೀಣರ ಸಭೆಯಲ್ಲಿ ಒಳಪಂಗಡಗಳನ್ನೆಲ್ಲ ನಾಶಮಾಡಲು ಬಿನ್ನವಿಸಿಕೊಂಡಿರುವರು ಆ ಬಗ್ಗೆ ಒಂದು ಗೊತ್ತುವಳಿಯೂ ಸ್ವೀಕೃತವಾಗಿದೆ. ತತ್ವತಃ ಇರುವ ಕಾಂಗ್ರೆಸ್ ಸಾಮ್ಯವಾದಿ ಪಕ್ಷ ಪುರೋಗಾಮಿ ಪಕ್ಷ ಮೊದಲಾದವುಗಳಿದ್ದುದು ಒಂದು ರೀತಿಯಿಂದ ಕ್ಷಮ್ಯವೆನಿಸಬಹುದು. ಆದರೆ ಗಾಂಧಿವಾದಿ ಕಾಂಗ್ರೆಸ್ಸಿಗರೆಂದು ಹೇಳಿಕೊಂಡು ಅಂತಃಕಲಹ ನಡೆಸುವುದು ಯಾವ ರೀತಿಯಿಂದಲೂ ಇಷ್ಟವಲ್ಲ. ಅಧಿಕೃತ ಕಾಂಗ್ರೆಸ ಧೋರಣೆಗೆ ವಿರೋಧಕವಾಗಿ ವರ್ತಿಸುವವರನ್ನು ಕಾಂಗ್ರೆಸ್ಸಿನಿಂದ ಹೊರಗೆ ಹಾಕಬೇಕು. ಕಾಂಗ್ರೆಸ ಅಧಿಕಾರಿಗಳೂ ತಮ್ಮ ಕರ್ತವ್ಯದ ಹೊಣೆಯನ್ನರಿತುಕೊಂಡು ಕಾಂಗ್ರೆಸ ತತ್ವ, ಧೋರಣೆಗನುಸಾರವಾಗಿ ನಡೆಯತಕ್ಕದ್ದು. ಅಧಿಕಾರಮದದಿಂದ ಅಳರಸರಂತೆ ವರ್ತಿಸಿ ಕಾಂಗ್ರೆಸ್ಸಿಗರನ್ನು ಛಲಿಸಬಾರದು. ಇದನ್ನೆಲ್ಲ ಅರಿತು ಆಯಾ ಪ್ರಾಂತಗಳಲ್ಲಿಯ ಕಾಂಗ್ರೆಸ್ ಕಾರ್ಯಕರ್ತರು ಹೊಣೆಯನ್ನು ತಿಳಿದುಕೊಂಡು ತಮ್ಮ ತಮ್ಮಲ್ಲಿಯ ಮತಭೇದಗಳನ್ನು ಮರೆತು ಎಲ್ಲರೂ ಐಕ್ಯದಿಂದ ಕಾರ್ಯಮಾಡಿ ಬರಲಿರುವ ಸ್ವಾತಂತ್ರ್ಯದ ಉಪಭೋಗ ಮಾಡಬೇಕು.

## ಅರಸರ ಅಧಿಕಾರ ದೈವಾಯತ್ತವೊ?

ಅರಸರ ಅಧಿಕಾರ ದೈವಾಯತ್ತವೆಂಬು ಹಲವು ಅರಸರು ಅವರ ಬಾಲ ಬಡೆಯು ದಿವಾಣ ಮೊದಲಾದ ಅಧಿಕಾರಿಗಳು ಪ್ರತಿಪಾದಿಸಿ ಸಂಸ್ಥಾನಗಳಲ್ಲಿನ ರಾಜ ಪ್ರಜರ ಸೌಹಾರ್ದ ಭಾವಕ್ಕೆ ಅರೆದಾಳ ಬಡೆಯುತಿರುವರು. ಇಂಥವರಿಗೆ ಸೊಂಡೂರಿನ ರಾಜೇಸಾಹೇಬರು ಖಂಡತುಂಡ ಉತ್ತರ ಕೊಟ್ಟು ಮಾರ್ಗದರ್ಶನ ಮಾಡಿದ್ದಾರೆ. ಪ್ರಜೆಗಳಿಗೆ ಸಲ್ಲಿಸಬೇಕಾದ ಕರ್ತವ್ಯಗಳೆ ಅರಸರ ಅಧಿಕಾರಗಳು. ಹಿಂದೂ ಧರ್ಮದ ಯಾವ ಗ್ರಂಥಗಳಲ್ಲಿಯೂ ಅರಸರ ಅಧಿಕಾರ ದೈವಾಯತ್ತವಾದುದೆಂದು ಹೇಳಿಲ್ಲ ಎಂದು ರಾಜೇಸಾಹೇಬರು ಬೆಂಗಳೂರಿನ ಒಂದು ಸಭೆಯಲ್ಲಿ ಹೇಳಿರುವರು. ಅಲ್ಲದೆ ಪರಕೀಯ ಸಂಸ್ಕೃತಿಯ ಪರಿಣಾಮವಾಗಿಯೇ ಇಂಥ ವಿಚಾರಗಳು ಭಾರತೀಯರಲ್ಲಿ ಉದ್ಭವಿಸಿದ್ದು. ನಮ್ಮ ಪರಂಪರೆಯಲ್ಲಿ ಅರಸನ ಕರ್ತವ್ಯಗಳನ್ನೆ ಹೇಳಿದೆಯಲ್ಲದೆ ಅಧಿಕಾರಗಳನ್ನಲ್ಲ ಎಂದು ರಾಜೇಸಾಹೇಬರು ಅಭಿಪ್ರಾಯಪಟ್ಟು ಕರ್ತವ್ಯವನ್ನು ಸರಿಯಾಗಿ ಮಾಡಿದರೆ ಸದ್ಯದ ರಕ್ತಪಾತ ನಿಂತು ಭಾರತದ ಸ್ವಾತಂತ್ರ್ಯ ಮಾರ್ಗ ಸುಗಮವಾಗುವದೆಂದೂ ಹೇಳಿರುವರು. ಅರಸರ ಈ ಅಧಿಕಾರ ದೈವಾಯತ್ತವಿಲ್ಲ; ಅವನೀತ ಅರಸರನ್ನು ಕಿತ್ತಿಹಾಕುವ ಅಧಿಕಾರ ಪ್ರಜೆಗಳಿಗಿದೆ ಎಂದು ಮುಂತಾದ ವಿಷಯವನ್ನು ಪ್ರಸಿದ್ಧ ರಾಜಕಾರಣಿ ಚಾಣಕ್ಯನು ಪ್ರತಿಪಾದಿಸಿದ್ದು ಶ್ರೀ ಮುಳಿಯ ತಿಮ್ಮಪ್ಪಯ್ಯನವರು ನಮ್ಮ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ ಎರಡು ಬರೆಹಗಳಿಂದ ಗೊತ್ತಾಗುವದು. ಹಿಂದುಸ್ತಾನದಲ್ಲಿನ ಅರಸರು ತಮ್ಮ ಹಿಂದಿನ ಪರಂಪರೆಗನುಸಾರವಾಗಿ ನಡೆದು ಸದ್ಯದ ರಾಜಪ್ರಜರಲ್ಲಿನ ತಿಕ್ಕಾಟವನ್ನು ನಿಲ್ಲಿಸಬೇಕು. ಇದರಲ್ಲಿ ಸೊಂಡೂರಿನ ರಾಜರು ಮಾರ್ಗದರ್ಶನ ಮಾಡಿದ್ದು ಅಭಿನಂದನೀಯ.

ಚಿಕ್ಕ ಕಥೆ



# ಚಿಕ್ಕ—ದೊಡ್ಡವರು

ಬರೆದವರು: ನಾಗೇಶ ಶಾನಭಾಗ ಮುಂಬೈ

*

ವರುಷಕ್ಕೊಂದು ಸಲ ನಮಗೆ ಎರಡೋ ಮೂರೋ ತಿಂಗಳಿನ ಬೋನಸ್ (Bonus) ಹಂಚುವರು. ಇಡೀ ವರ್ಷ ಮಾಡಿದ "ಸಾಲ ತೀರಿಸಲು" ಅದನ್ನು ಉಪಯೋಗಿಸಿರಿ ಎಂದು ಚೀಟಿಯೊಂದಿರುತ್ತದೆ ಅದರೊಟ್ಟಿಗೆ. ಆದರೆ ಅದು ನಮ್ಮ ಸಾಲದ ಕಾಲಂಶವೂ ಅಲ್ಲ. ಆದರೂ ಅಷ್ಟೇ ನಮಗೆ ಆನಂದ: ತುಸು ಹೆಚ್ಚು ಖರ್ಚುಮಾಡಲು ಅನುಕೂಲವೆಂದು.

ಕ್ರಿಸ್‌ಮಸ್ ಸೂಟಿಯ ಮುನ್ನಾದಿನವೇ ನಮಗೆ ನಮ್ಮ ಡಿಸೆಂಬರ ತಿಂಗಳ ಸಂಬಳ ಹಾಗೂ ಬೋನಸ ಹಂಚಿದ್ದರು. ಹಲವು ಜನರಿಗೆ ಸಂಬಳ ಮುಂಚಿತವಾಗಿ ಸಿಕ್ಕಿದ್ದಕ್ಕೆ ಆನಂದವಾದುದು ಸಹಜವೇ. ಆದರೆ ಕೆಲವರಿಗೆ ಸಂಬಳ ಮುಂಚಿತ ಸಿಕ್ಕರೆ ಖರ್ಚು ಮುಂಚಿತವಾಗಿಯೇ ಆರಂಭವಾಗುತ್ತದೆಂಬ ಭೀತಿ. ಕಾರಣ ಅವರಿಗೆ ಸಮಾಧಾನವಾಗಲಿಲ್ಲ. ಆದರೆ ಹಣವೆಂದ ಮೇಲೆ ಸ್ವೀಕಾರಮಾಡದೆ ಇರುವರೆ?

ಅದಿನ ನನ್ನ ಆತುರ ಹೇಳತೀರದಷ್ಟು. ಓಡುತ್ತ ಗಾಡಿ ಹಿಡಿದೆ. ಕುಳಿತುಕೊಳ್ಳಲು ಪ್ರಶಸ್ತ ಸ್ಥಳವೂ ಸಿಕ್ಕಿತು. ಹೊರಜೇಬಿನಿಂದ ನೋಟ ಬುಕ್ಕನ್ನು ಹೊರತೆಗೆದೆ. ಮತ್ತೆ ಆಯವ್ಯಯದ ಅಜಮಾಸು ಪತ್ರಿಕೆ ತಯಾರಿಸಹತ್ತಿದೆ. ನನ್ನಾಕೆಯ ನೆನಪು ಬಂತು ನಾನು ಅವಳಿಗೆ ಕೊಟ್ಟ ವಚನ ಈ ಸಾರೆಯಾದರೂ ಪೂರ್ಣಮಾಡಬೇಡವೇ? ಎಷ್ಟೋ ಸಲ ಹಟಹಿಡಿದು ಅತ್ತು ಕರೆದು ರಾತ್ರಿ ಊಟವಿಲ್ಲದೆ ಮಲಗಿದ್ದಾಳೆ. ಅಂದ ಮೇಲೆ ಅವಳಿಗೊಂದು ಚನ್ನಾದ ಪತ್ತಲ ಆಗಬೇಕು. ಮತ್ತು ಒಂದು ಫ್ಯಾನ್ಸಿ ಬಂಗಾರದ ಬಳೆಯ ಜೋಡು. ಅಷ್ಟಕ್ಕೆ ತೀರಿತೇ? ನನ್ನ ಮಗು ಲತಾಗೆ ಏನೂ ಬೇಡವೇ? ಬೇಕು. ಏನಾದರೂ ತೆಗೆದುಕೊಂಡರಾಯಿತು. ಎಲ್ಲಾ ನೋಟ ಬುಕ್ಕಿನಲ್ಲಿ ಗೀಚಿದೆ. ಕಳೆದು ಕೂಡಿಸಿ ಕೊನೆಯಲ್ಲಿ ತಿಂಗಳಿಗೆ ಸಾಲುವಷ್ಟು ಉಳಿತಾಯವಾದೀತೆಂದು ಕಂಡಿತು. ಬಲು ಹಿಗ್ಗಿದೆ. ಅಂತೂ ಈ ಸಲ ಮಾತು ನಡೆಸಲು ಬಂದೀತು ಎಂದು ಸಮಾಧಾನವಾಯಿತು. ಈ ಲೆಕ್ಕಾಚಾರದಲ್ಲಿ ಸ್ಟೇಶನ್ ಬಂದುದೂ ತಿಳಿಯಲಿಲ್ಲ. ಸ್ಟೇಶನ್ನಿನ ಗಂಟೆ ಬಾರಿಸಿದ ಕೂಡಲೇ ಎಚ್ಚರಾಯಿತು ಹಾರಿಕೊಂಡೆ. ಅಂತೂ ಸುರಕ್ಷಿತವಾಗಿ ಮನೆಯ ದಾರಿಹಿಡಿದೆ.

ಮನೆಯ ಎದುರು ಬಂದಾಗ ನನ್ನಾಕೆ ಶೀಲಾ ಮಗುವನ್ನು ಹಿಡಿದು ನನ್ನ ಬರುವಿಕೆಗಾಗಿ ಕಿಡಕಿಯ ಬಳಿ ಕಾದು ನಿಂತಿದ್ದಳು. ನನ್ನನ್ನು ಕಾಣುತ್ತಲೇ ಲತೆಯೂ ಚಪ್ಪಾಳೆ ಹೊಡೆದು ಕರೆಯಹತ್ತಿದಳು. ನಾನು ಮಹಡಿಯೇರಿ "ಲತಾ" ಎಂದು ಮಗುವನ್ನು ಕರೆದೆ

"ಅಪ್ಪಾ ಅಪ್ಪಾ" ಎನ್ನುತ್ತ ತಾಯ ಕೈಯಿಂದ ಇಳಿದು ಓಡುತ್ತ ಬಂದಳು. ಆದರೆ ನನ್ನಾಕೆ ಮಾತ್ರ ಮುಂಚಿನಂತಿಯೇ ನಿಂತಿದ್ದಳು. ಮುಖ ತುಸು ಉಬ್ಬಿದಂತೆ ಇತ್ತು. ಕೋಪದ ನಟನೆಯಿದ್ದಿರಬೇಕು. ನಾನೂ ಗಮನಿಸದೆ ನಮ್ಮ ಕೋಣೆಯೊಳಕ್ಕೆ ಹೋದೆ. ಆಗ ಅವಳು ಒಳಕ್ಕೆ ಬಂದು ನನ್ನ ಕೈಯಿಂದ ಕೋಟನ್ನು ಇಸಕೊಂಡು ಗೂಟಕ್ಕೆ ತೂಗಹಾಕಿದಳು. ನಾನು ಬೂಟಿನ ದಾರ ಬಿಚ್ಚುತ್ತಲೆ ಇದ್ದೆ. ನನ್ನಾಕೆ ಕುತೂಹಲದಿಂದ "ಬೋನಸ್ ಸಿಕ್ಕಿತೇ?" ಎಂದು ಕೇಳಿದಳು.

ಅವಳಿಗೂ ತಿಳಿದಿತ್ತು. ಇಂದು ನಮಗೆ ಬೋನಸ್ ಸಿಗುವದೆಂದು "ಅಹುದು ಸಂಬಳ ಕೂಡಾ ಇವತ್ತೇ ಕೊಟ್ಟರು" ಎಂದೆ. "ಏನು ಸಿಕ್ಕರೂ ನಿಮಗೆ ನನ್ನ ಪರಿವೆ ಇದೆಯೇ?" ಎಂದು ಕೊಂಕು ಮಾತನಾಡಿದಳು.

"ಶೀಲಾ, ನಿನಗೆ ಏನೆಲ್ಲ ಆಗಬೇಕು, ಎಲ್ಲಾ ಹೇಳಿ ಬಿಡು. ಅಂದರೆ ಈ ತಿಂಗಳು ಎಲ್ಲಾ ತಂದು ಕೊಡುತ್ತೇನೆ. ಈ ಸಾರೆ ತಪ್ಪುವದಿಲ್ಲ" ಎಂದು ಸಮಾಧಾನದಿಂದ ಹೇಳಿದೆ.

"ಮತ್ತೂ ಪಾಠ ಹೇಳಬೇಕೆ? ನಿಮಗೆ ಮರವು ಜಾಸ್ತಿ."

"ನೋಡು ಶೀಲಾ ನಾನು ಇಡೀ ಸಂಸಾರ ಸಾಗಿಸುವವ. ಆಫೀಸಿನಲ್ಲಿ ಕೆಲಸ ಮನೆಯಲ್ಲಿಯ ತಾಪತ್ರಯ ಅಂದ ಮೇಲೆ ನಾನೊಬ್ಬ ಎಷ್ಟೆಲ್ಲ ವಿಷಯ ನೆನಪು ಇಟ್ಟುಕೊಳ್ಳುವದು?"

"ನಿಮ್ಮ ಬೂಟ್ಸು ಪ್ಯಾಂಟು ಇವುಗಳ ವಿಷಯವಾದರೆ?......ಚೆನ್ನಾಗಿ ನೆನಪು ಇರುತ್ತದಲ್ಲವೇ?" ಅಸಮಾಧಾನದಿಂದ ನುಡಿದಳು. "ಇಂದೇನು ಮನೆಗೆ ಬಂದಕೂಡಲೆ ಪ್ರಾರಂಭಿಸಿಬಿಟ್ಟೆಯಲ್ಲ. ಒಂದು ತುಸಾ ಕಾಫಿ ಗೀಫಿ ಕುಡಿಯಬಿಡು. ಆ ಮೇಲೆ ಎಲ್ಲಾ ಹೇಳುವೆಯಂತೆ" ಎಂದು ಬೂಟು ಬಿಚ್ಚಿ ಮೂಲೆಯಲ್ಲಿ ಇರಿಸಿದೆ. ಕಾಫಿ ಕುಡಿದು ಸೋಫಾದ ಮೇಲೆ ಕೂತು ನನ್ನಾಕೆಯೊಡನೆ ಮಾತನಾಡಹತ್ತಿದೆ.

"ನೋಡು ಶೀಲಾ, ನಾಳೆ ಶುಕ್ರವಾರ. ನಾಡದು ಶನಿವಾರದಿಂದ ನಮಗೆ ರಜೆ. ಶನಿವಾರ ತಪ್ಪಿದರೆ ರವಿವಾರವಾದರೂ ಪೇಟೆಗೆ ಹೋಗುವಾ ನಿನಗೆ ಬೇಕಾದ ತರಹದ ಪತ್ತಲ ಆರಿಸಿಕೋ ಮತ್ತೆ ಬಳೆ ಬೇಕಾದ್ದು ತೆಗೆಸಿಕೊಡುವೆ."

"ಅದೆಲ್ಲ ಸರಿ. ಆದರೆ ನಿಮ್ಮ ಕೈಯಲ್ಲಿ ಈ ರೂಪಾಯಿ ಉಳಿಯ ಬೇಕಲ್ಲವೆ? ಅಲ್ಲಾ ನಾನು ಕಂಡಿಲ್ಲವೆ ನಿಮ್ಮ ಸಂಸಾರ ನಡೆಸುವ ರೀತಿಯನ್ನ? ನಾಲ್ಕು ವರುಷಗಳಿಂದ ನೋಡುತ್ತಾ ಇದ್ದೇನೆ. ನಿಮಗೆ ಪರರವರ ಬಗ್ಗೆ ತುಂಬಾ ಕನಿಕರ, ದಯೆ. ದಾನಧರ್ಮ ಮಾಡಲಿಕ್ಕೆ ನಿಮಗೆ ಇದ್ದಷ್ಟು ಸಾಲದು. ಅಂದ ಮೇಲೆ ಉಳಿತಾಯವೆಲ್ಲಿ? ನಿಮಗೇನು? ದುಡಿದು ತರುತ್ತೀರಿ ಆದರೆ ಇಲ್ಲಿ ಮನೆಯಲ್ಲಿ ಒಂದಿಲ್ಲ, ಒಂದಿದೆ ಎಂದು ನೋಡಿಕೊಂಡು ಹೋಗುವವರ್‍ಯಾರು? ನಾನೇ ಅಲ್ಲವೆ?"

"ಆಯಿತು. ಮಹಾರಾಯತಿ ನೀನೇ ಎಲ್ಲಾ ಮಾಡುತ್ತೀ ನಿನ್ನಷ್ಟು ಬುದ್ಧಿವಂತಿಕೆ ನನ್ನಲ್ಲಿಲ್ಲ ಅಂತ ಒಪ್ಪುವೆ ತೀರಿತೊ?"

"ತೀರುವದೇನು? ನಿಮ್ಮ ಹುಟ್ಟುಗುಣಾ ಸುಲಭದಲ್ಲಿ ಹೋದಾವೇ?"

"ಇಲ್ಲಾ, ಈಸಾರೆ ನನ್ನಾಣೆಯಾಗಿಯೂ ಒಂದು ಪೈ ಕೊಡುವದಿಲ್ಲ."

ಅಂತೂ ನನ್ನಾಕೆಗೆ ಸಮಾಧಾನ ಮಾಡಲು ಹವಣಿಸಿದೆ. ಆದರೆ ಅವಳ ಶಂಕೆ ಮಾತ್ರ ದೂರವಾಗಲಿಲ್ಲ.

* * * *

ಅವಧಾನಿ ಸುಬ್ಬಣ್ಣನವರು ನಮ್ಮ ನೆರೆಮನೆಯವರು. ಚಲೋ ಸಂಬಳದಾರರಾಗಿದ್ದರು. ಊರಲ್ಲಿ ಆಸ್ತಿಯೂ ಇದ್ದಿರಬೇಕು. ಈರೀತಿ ಯಾವುದರ ಕೊಂದರೆಯೂ ಅವರಿಗೆ ಬಾಧಿಸುತ್ತಿರಲಿಲ್ಲ ಮನೆಯಲ್ಲಿ ೪–೫ ಮಕ್ಕಳು ಮತ್ತು ಚದುರೆಯಾದ ಹೆಂಡತಿ. ನಮಗೂ ಅವಧಾನಿಗಳಿಗೂ ಪರಿಚಯವಾಗುವದಕ್ಕೆ ಕಾರಣವೆಂದರೆ ಅವರು ನಮ್ಮ ಜಿಲ್ಹೆಯ ಕನ್ನಡಿಗರೆಂದು ಮುಂಬಯಿ ಮಹಾನಗರದಲ್ಲಿ ನಮ್ಮ ಕಡೆಯ ಒಬ್ಬ ಸಿಕ್ಕಿದರೂ ಮಾತನಾಡಿಸುವಾ ಎನ್ನಿಸುತ್ತದೆ. ಕನ್ನಡ ನುಡಿ ಕೇಳೋಣವೆನ್ನಿಸುತ್ತದೆ. ಹೀಗೆ ಪರಸ್ಪರರಲ್ಲಿ ಪರಿಚಯವಾಯಿತು. ಬರಬರುತ್ತ ನಮ್ಮ ಮೈತ್ರಿ ವಿಪರೀತವಾಯಿತು. (ಮೀರಿ ಮೀರಿತ್ತು ಎಂದು ಈಗ ತಿಳಿಯುತ್ತದೆ.) ಆದರೆ ನನ್ನಾಕೆಗೆ ಇದೆಲ್ಲ ರುಚಿಸದು. ಅವಳು ತುಸು ನಾಜೋಕಿನವಳು. ಎಲ್ಲರೊಡನೆಯೂ ಬೆರೆತು ಇರುವವಳಲ್ಲ. ಅವಳಿಗೆ ತುಸು ಗೌರವ ಬೇಕು. ಅವಳಲ್ಲಿ ತುಸು ಅಭಿಮಾನವೂ ಇದೆ. ಹೀಗಾಗಿ ನಮ್ಮಿಬ್ಬರ ಗೆಳೆತನಕ್ಕೆ ಅವಳ ಮಾನ್ಯತೆಯಿರಲಿಲ್ಲ.

ಮರುದಿನ ಶುಕ್ರವಾರ ಬೆಳಗಾಯಿತು. ಪ್ರಾತರ್ವಿಧಿಗಳನ್ನು ತೀರಿಸಿ ಕೋಣೆಯೊಳಕ್ಕೆ ಹೋಗುತ್ತಿದ್ದೆನಷ್ಟೆ "ಸೀತಾರಾಮ ಹೆಗ್ಗಡೆಯವರೇ" ಎಂದು ಕರೆದಂತಾಯಿತು. ಹೊರಳಿ ನೋಡಿದೆ, ಅವಧಾನಿಗಳು. ಕೌತುಕವಾಯಿತು ನನಗೆ "ಸೀತಾರಾಮು" ಎಂದು ಕರೆಯುವ ಅವಧಾನಿಗಳು ಇಂದು ಬಹುವಚನದಲ್ಲಿ ಕರೆಯುವರಲ್ಲಾ ಏನೋ ವಿಶೇಷವಿದ್ದಿರಬೇಕೆಂದೆನಿಸಿತು.

ಅಲ್ಲಿಯೇ ನಿಂತು, "ಏನಾಗಬೇಕು ಅವಧಾನಿಗಳೇ?" ಎಂದು ಕೇಳಿದೆ. ಬಳಿಗೆ ಬಂದು "ಒಳಕ್ಕೆ ಹೋಗಿ, ಎಲ್ಲಾ ಹೇಳುವೆ" ಎಂದು ಬೆನ್ನು ಚಪ್ಪರಿಸುತ್ತ ನನ್ನನ್ನು ನಮ್ಮ ಕೋಣೆಯೊಳಕ್ಕೆ ಒಯ್ದು ತಾವು ಮಂಚದ ಮೇಲೆ ಕೂತರು.

ಶೀಲಾ ಪಡದೆಯ ಆಚೆಯಿಂದ ಮುಂದೆ ಬಂದು ನೋಡಿ ಮತ್ತೆ ಮರೆಯಾದಳು. "ನೋಡಿ" ಎಂದು ಪ್ರಾರಂಭಿಸಿದರು. ಅವಧಾನಿಗಳು, "ನಮ್ಮ ಸರಕಾರಿ ನೌಕರರ ಸಂಕಟ ಹೇಳತೀರದು. ಬೇಡಿದಾಗ ರಜೆಯಿಲ್ಲ. ತಿಂಗಳಿನ ಸಂಬಳ ಒಮ್ಮೆ ಒಂದನೇ ತಾರೀಖಿಗೆ ಒಮ್ಮೆ ಆರನೇ ತಾರೀಖಿಗೆ ಹೀಗೆ ಮನಸ್ಸಿಗೆ ಬಂದಾಗ ಕೊಡುವರು. ನಮ್ಮ ದೂರು ಕೇಳುವವರಾರು. ಸರಕಾರವೆಂದಮೇಲೆ ದೂರು ತಲಪುವದಕ್ಕೆವರ್ರು ಷಾರು ತಿಂಗಳು ಬೇಕು. ಅಷ್ಟರತನಕ ನಮ್ಮ ಹೊಟ್ಟೆಗೆ ಮಣ್ಣು. ನಿಮ್ಮ ಆಫೀಸಿನಂತೆಯೆ? ನಿಮ್ಮ ಆಫೀಸು ಇಡೀ ಮುಂಬಯಿಯಲ್ಲಿ ಹಿರಿದು ನೋಡಿ. ಏನು ವ್ಯವಸ್ಥೆ ಅವರದು! ಎಷ್ಟ ಥಾಟು ಅಲ್ಲಿಯದು! ಒಬ್ಬ ಹೊಸಬ ಬಂದ ಅಂದರೆ "ಜೀ ಸರಕಾರ" ಎಂತ ಸಲಾಮು ಮಾಡಿ ಬಂದ ಕೆಲಸಮಾಡಿ ಕೊಡುವರು. ಸಂಬಳವಂತೂ ನಿಯಮವಾಗಿ ಕೊಡುತ್ತಾರೆ. ನಮ್ಮಂತೆ ಯಾವದೇ ತಾಪತ್ರಯವಿಲ್ಲ."

"ಸಂಬಳ," ಎಂಬ ಶಬ್ದ ನನ್ನಾಕೆಯ ಕಿವಿಗೆ ಚನ್ನಾಗಿ ಕೇಳಿಸಿರಬೇಕು. ಮತ್ತೊಮ್ಮೆ ಈಚೆಗೆ ಬಂದು ಅವರ ಕಡೆಗೊಮ್ಮೆ ಮತ್ತೆ ನನ್ನ ಕಡೆಗೊಮ್ಮೆ ಬಿರುಗಣ್ಣಿನಿಂದ ನೋಡಿ ಮೋರೆ ತಿರುವಿಸಿ ಮತ್ತೆ ಮರೆಯಾದಳು.

"ಕ್ಷಮಿಸಿ, ನಿಮ್ಮ ವೇಳೆ ಹಾಳು ಮಾಡುತಿದ್ದೇನೆ."

"ಏನು ಕ್ಷಮೆ? ಇದೇನು ನೀವು ಕ್ಷಮೆ ಕೇಳಬೇಕಾಗಿಲ್ಲ" ಎಂದು ನಗುತ್ತ ಹೇಳಿದೆ. ದಿನವೂ ನನ್ನ ಸಂಗಾತ ಗಂಟೆಗಟ್ಲೆ ಹರಟೆ ಕೊಚ್ಚುವ ಅವಧಾನಿಗಳಿಗೆ ಇಂದು ವೇಳೆಯ ಮಹತ್ವ ತಿಳಿಯಿತೆ?

"ನನ್ನಾಕೆಗೆ ತಿಂಗಳು ತುಂಬಿತು. ಇಂದೋ ನಾಳೆ ಹೆರಿಗೆಯಾಗಬಹುದು. ಭರವಸೆಯಿಲ್ಲ. ಎಲ್ಲರೂ ಅನ್ನುತ್ತಿರಬೇಕು ನನಗೆ ತುಂಬ ಸಂಬಳ ಬರುತ್ತದೆಂದು. ಆದರೆ ದಿಟ ಹೇಳಬೇಕೆಂದರೆ, ತಿಂಗಳ ಕೊನೆಗೆ ಕೈಯಲ್ಲಿ ತಾಮ್ರದ ಒಂದು ದುಡ್ಡೂ ಇರುವದಿಲ್ಲ."

"ಎಲ್ಲರ ಹಾಡೂ ಹಾಗೆಯೇ ನಿಮ್ಮದೇನೂ ವಿಶೇಷವಲ್ಲ," ಎಂದು ಮಾತು ಹಾರಿಸಬಯಸಿದೆ.

"ನೋಡಿ, ನನ್ನಾಕೆಯ ಹೆಸರನ್ನೇನೂ ಹೆರಿಗೆಯ ಆಸ್ಪತ್ರೆಯಲ್ಲಿ ಬರೆದಿಲ್ಲ. ಮನೆಯಲ್ಲಿಯೇ ಮಾಡುವಾ ಅಂತ ಅತ್ತೆಮ್ಮನವರು ಹೇಳಿದರು. ಮನೆಯಲ್ಲಿ ಅಂದಮೇಲೆ ಅದಕ್ಕೆ ತಕ್ಕ ತಯಾರಿಯಾಗಬೇಡವೇ? ಅದಕ್ಕೆಲ್ಲ ಹಣ ಬೇಕು. ಈಗ ನನ್ನಕೈಲಿ ಪೈಯೊಂದಿಲ್ಲ. ಸಂಬಳವಾಗುವದಕ್ಕೆ ಇನ್ನೂ ಒಂದು ವಾರ ಹೋಗಬೇಕು. ಕಾರಣ ನಿಮ್ಮ ಕೈಲಿ........." ಎಂದು ಹುಚ್ಚುನಗೆ ನಕ್ಕು ಅಂಗಲಾಚಿ ಬೇಡಹತ್ತಿದರು, ಕೈಮುಗಿದರು.

"ಛೆ, ಛೆ. ಹಾಗೆ ಮಾಡಬಾರದು. ನೀವು" ಎಂದು ತಡೆದೆ ಅವರನ್ನು. "ಕಾರಣ ನಿಮ್ಮ ಕೈಲಿ ಒಂದು ಐವತ್ತು ರೂಪಾಯಿ ಇಸಗೊಂಡು ಹೋಗೋಣ ಅಂತ ಬಂದೆ. ನಮ್ಮ ಸಂಬಳವಾದ ದಿವಸವೇ ನಿಮ್ಮ ಹಣ ವಾಪಸ್ಸು ಮಾಡುತ್ತೇನೆ. ಖಂಡಿತ" ಎಂದು ಮತ್ತೆ ಕೈಮುಗಿದರು. ಕಣ್ಣಿಗೆ ನೀರು ತರಿಸಿದರು.

ನಾನು ತುಂಬಾ ಕನಿಕರದವನು. ಮನಸ್ಸಿನಲ್ಲಿ ಏನೊ ಅನಿಸಿತು. ಆದರೆ ತಕ್ಷಣ ನನ್ನಾಕೆಯ ನೆನಪಾಯಿತು. ಮನಸ್ಸು ಗಟ್ಟಿಯಾಗುವಂತೆ ತಡೆದೆ

"ನಿಮಗೆ ನನ್ನ ಮೇಲೆ ವಿಶ್ವಾಸವಿಲ್ಲವೇ?"

"ವಿಶ್ವಾಸವಿಲ್ಲವೆಂದು ಯಾರು ಹೇಳಿದರು? ಆದರೆ, ನನ್ನ ಕೈಲಿ ಏನೂ ಇಲ್ಲವಲ್ಲ," ಎಂದು ಒಳಕೋಣೆಯ ಕಡೆ ಹೋದೆ.

"ನಿಮಗೆ ನಿನ್ನೆ..." ಎಂದು ಅವಧಾನಿಗಳು ಏನೋ ಅನ್ನುತ್ತಿದ್ದರು. ನನಗೆ ಕೇಳಿಸಲಿಲ್ಲ.

ಶೀಲಾ ನನ್ನನ್ನು ಕಾಣುತ್ತಲೇ ಸಿಟ್ಟಿನಿಂದ ಮಾತಾಡಿಸಲೇ ಇಲ್ಲ. ನಾನು ಅವಳಿಗೆ ಹೇಳಿದೆ, "ನೋಡು ನಿನಗೆ ಇಷ್ಟು ತಿಳಿಯುವದಿಲ್ಲವೇ? ನಾನೇನು ಹಣವನ್ನು ದಾನ ಮಾಡುತ್ತೇನೆಯೋ? ಅವರಿಗೆ ಒಂದು ಐವತ್ತು ರೂಪಾಯಿ ಈಗ ಕೊಟ್ಟರೆ ಒಂದು ವಾರದಲ್ಲಿ ತಿರುಗಿ ಸಿಗುತ್ತದೆ. ಅಂದಮೇಲೆ ಕೊಡಲಿಕ್ಕೆ ಅಡ್ಡಿಯೇನು?"

"ಅಡ್ಡಿಯೇನು? ನಿಮ್ಮ ಗೆಳೆಯರನ್ನೆಲ್ಲ ಬಲ್ಲೆ. ಎಲ್ಲರೂ ಶುದ್ಧ ಕಳ್ಳರು. ದುಡ್ಡಿಗಾಗಿ ನಿಮ್ಮ ಸುತ್ತು ತಿರುಗುವವರು. ನೀವೇನೊ ಹೇಳ್ತೀರಿ. ಆದರೆ ಅವರು ತಿರುಗಿ ಕೊಡುವರೆಂದು ನನಗೆ ನಂಬಿಗೆಯಿಲ್ಲ."

"ನಿನಗೆ ನನ್ನ ಮೇಲೆಯಾದರೂ ಭರವಸೆಯಿಲ್ಲವೇ?" "ಇಲ್ಲದೆಯೇನು? ಆದರೆ ನನಗೆ ಬೇಕಾದ ಪತ್ತಲ—ಬಳೆ ತರುವದು ಯಾವಾಗ?" "ಅಲ್ಲಾ ನೋಡು ಅದಕ್ಕೂ ಇದಕ್ಕೂ ಏನು ಸಂಬಂಧ? ಐವತ್ತು ರೂಪಾಯಿ ಕೊಟ್ಟರೆ ಉಳಿದ ಹಣದೊಳಗಿಂದ ತರಬಹುದು."

"ನಂತರ ಉಳಿದ ಹಣ ಹದಿನೈದು ದಿನ ನಿರ್ವಾಹಕ್ಕೆ ಸಾಲದಲ್ಲ?" "ಅದಕ್ಕೆ ನಾನೆಲ್ಲ ಯೋಜನೆ ಮಾಡುತ್ತೇನೆ. ನಿನಗೆ ತುಸುವೂ ಕನಿಕರವಿಲ್ಲ ನೋಡು," ಎಂದೆ.

"ನಿಮಗೆ ಇದ್ದದ್ದೇ ಸಾಕು. ನೀವು ಮನೆಯ ಗಂಡಸರು. ನಿಮಗಿರಬೇಕು ಧೂರ್ತತನ. ಮುಂದೆ ಬೇಕು ಎಂದರೆ ಒಂದು ಪೈ ಸಿಗುವಂತಿಲ್ಲ. ನಿಮಗೆ ಮನಸ್ಸಿಗೆ ಬಂದಂತೆ ಮಾಡಿ" ಎಂದು ನನ್ನ ಕೈಗೆ ಕೀಲಿಕೈ ಇತ್ತಳು. ನಾನು ಹತ್ತರ ಐದು ನೋಟುಗಳನ್ನು ತೆಗೆದುಕೊಂಡು ಹೊರಕ್ಕೆ ಬಂದೆ.

"ನಿಮ್ಮ ಗುಣ ನನಗೆ ಗೊತ್ತಿಲ್ಲವೆ? ನೀವು ತುಂಬಾ ಉದಾರರು. ತನ್ನಿ" ಎಂದು ಕೈ ಚಾಚಿದರು. ಅವರ ಕೈಗೆ ಹಣವನ್ನಿತ್ತೆ.

"ತುಂಬಾ ಉಪಕಾರವಾಯಿತು. ಎರಡನೇ ತಾರೀಖಿಗೆ ನಾನೇ ಬಂದು ನಿಮ್ಮ ಹಣ ಫೇಡ (Paid) ಮಾಡುತ್ತೇನೆ. ಖಂಡಿತ," ಎಂದು ನಮಸ್ಕರಿಸಿ ಹೊರಬಿದ್ದರು.

ನಾನು ಒಳಕ್ಕೆ ಹೋಗಿ ಕಾಫಿ ಕುಡಿಯಲು ಕೂತೆ.

"ನಾನು ಮುಂಚೆಯೇ ಹೇಳಿರಲಿಲ್ಲವೇ? ನಿಮ್ಮ ಕೈಲಿ ಹಣವು ಇರುವದಿಲ್ಲೆಂದು; ನೀವೆಲ್ಲ ಕೇಳುತ್ತೀರಿ? ಮುಂದೆನಾದೀತು ಎಂಬುವದರ ಪರಿವೆಯೇ ಇಲ್ಲ ನಿಮಗೆ" ಎಂದು ಚುಚ್ಚಿ ಮಾತಾಡಿದಳು ಶೀಲಾ.

ನಾನು ಮಾತನಾಡಲಿಲ್ಲ.

"ನನ್ನ ಮಾತು ಕೇಳಿ. ಹೀಗೆ ಮಾಡಿ ನಿಮ್ಮ ಗಿರಾಕಿಯನ್ನು ನಂಬಿ ಕೂತರೆ ಈ ತಿಂಗಳು ನಾವು ಉಪವಾಸ ಬೀಳಬೇಕಾಗುವದು. ಕಾರಣ ಮುಂದಿನ ತಿಂಗಳೇ ನನ್ನ ಪತ್ತಲು ಬಳೆ ತರಬಹುದು. ಅಷ್ಟೇನು ಅವಸರವಿಲ್ಲ," ಎಂದು ಸೂಚಿಸಿದಳು.

"ಶೀಲಾ, ಇದೇ ತಿಂಗಳು ಪತ್ತಲ—ಬಳೆ ತೆಗೆದುಕೊಳ್ಳಲೇನಡ್ಡಿ? ಹಣವಂತೂ ಇದೆಯಲ್ಲಾ. ಉಳಿದ ಹಣ ಸಾಲದಿದ್ದರೆ ಅವಧಾನಿಗಳು ಕೊಡುವದಿಲ್ಲವೇ? ಅದರ ಯೋಚನೆ ನಿನಗ್ಯಾಕೆ?"

"ಬೇಕಾದ್ದು ಮಾಡಿ. ನನ್ನ ಮಾತು ನೋಡು ವಿರಂತೆ," ಎಂದು ಸುಮ್ಮನಾದಳು.

* * * *

ರವಿವಾರ ದಿನ ನಾನು ನನ್ನಾಕೆಯನ್ನು ಕರೆದುಕೊಂಡು ಪೇಟೆಗೆ ಹೋದೆ. ಪೇಟೆಯಲ್ಲೆಲ್ಲ ಜನಸಮ್ಮರ್ದ ಹೇಳತೀರದು. ಅಂತೂ ಜವಳಿ ಅಂಗಡಿಗೆ ತಲುಪಿ ಆಯಿತು. ತರತರಹದ ಪತ್ತಲಗಳನ್ನು ತೋರಿಸಿದರು. ಆದರೆ ಶೀಲೆಯ ಮುಖದ ಮೇಲೆ ಗೆಲುವಿನ ಚಿಹ್ನವಿಲ್ಲ. ಮುಖ ಬಾಡಿತ್ತು! ಮನಸ್ಸಿನಲ್ಲಿ ಏನೋ ಕಟಿಯುತ್ತಿದ್ದಿರಬೇಕು. ಅಂತೂ ಕೊನೆಗೊಮ್ಮೆ ಗುಲಾಬಿ ಬಣ್ಣದ ಪತ್ತಲೊಂದನ್ನು ಆರಿಸಿದೆ. ನಾನು ಅದನ್ನು ಬಹುವಾಗಿ ಮೆಚ್ಚಿದೆ. ಯಾಕಂದರೆ ಅದು ಶೀಲೆಗೆ ಸರಿಯಾಗಿ ಒಪ್ಪುತ್ತಿತ್ತು. ಅಲ್ಲಿಂದ ಚಿನಿವಾಲ ಕಟ್ಟೆಗೆ ಹೋದೆವು. ಅಲ್ಲಿಯೂ ಜನಸಮ್ಮರ್ದ ಕಡಿಮೆಯಿರಲಿಲ್ಲ. ಜನ ಬಂಗಾರದ ದರವನ್ನು ಗಮನಿಸುತ್ತಿಲ್ಲವೋ ಏನೋ! ಜಗ್ಗಾಟ—ನುಗ್ಗಾಟದಲ್ಲಿ ಸಾಕಾಗಿ ಹೋಯಿತು.

—೧೫ನೇ ಪುಟಕ್ಕೆ

ವರುಷಕ್ಕೊಂದು ಸಲ ನಮಗೆ ಎರಡೋ ಮೂರೋ ತಿಂಗಳಿನ ಬೋನಸ್ (Bonus) ಹಂಚುವರು. ಇದೀ ವರ್ಷ ಮಾಡಿದ "ಸಾಲ ತೀರಿಸಲು" ಅದನ್ನು ಉಪಯೋಗಿಸಿರಿ ಎಂದು ಚೀಟಿಯೊಂದಿರುತ್ತದೆ ಅದರೊಟ್ಟಿಗೆ. ಆದರೆ ಅದು ನಮ್ಮ ಸಾಲದ ಕಾಲಂಶವೂ ಅಲ್ಲ. ಅದರೂ ಅಷ್ಟೇ ನಮಗೆ ಆನಂದ: ತುಸು ಹೆಚ್ಚು ಖರ್ಚುಮಾಡಲು ಅನುಕೂಲವೆಂದು.

ಕ್ರಿಸ್‌ಮಸ್ ಸೂಟಿಯ ಮುನ್ನಾದಿನವೇ ನಮಗೆ ನಮ್ಮ ಡಿಸೆಂಬರ ತಿಂಗಳ ಸಂಬಳ ಹಾಗೂ ಬೋನಸ ಹಂಚಿದ್ದರು. ಹಲವು ಜನರಿಗೆ ಸಂಬಳ ಮುಂಚಿತವಾಗಿ ಸಿಕ್ಕಿದ್ದಕ್ಕೆ ಆನಂದವಾದುದು ಸಹಜವೇ. ಆದರೆ ಕೆಲವರಿಗೆ ಸಂಬಳ ಮುಂಚಿತ ಸಿಕ್ಕರೆ ಖರ್ಚು ಮುಂಚಿತವಾಗಿಯೇ ಆರಂಭವಾಗುತ್ತದೆಂಬ ಭೀತಿ. ಕಾರಣ ಅವರಿಗೆ ಸಮಾಧಾನವಾಗಲಿಲ್ಲ. ಆದರೆ ಹಣವೆಂದ ಮೇಲೆ ಸ್ವೀಕಾರಮಾಡದೆ ಇರುವರೆ?

ಆದಿನ ನನ್ನ ಆತುರ ಹೇಳತೀರದಷ್ಟು. ಓಡುತ್ತ ಗಾಡಿ ಹಿಡಿದೆ. ಕುಳಿತುಕೊಳ್ಳಲು ಪ್ರಶಸ್ತಸ್ಥಳವೂ ಸಿಕ್ಕಿತು. ಹೊರಜೇಬಿನಿಂದ ನೋಟಬುಕ್ಕನ್ನು ಹೊರತೆಗೆದೆ. ಮತ್ತೆ ಆಯವ್ಯಯದ ಅಜಮಾಸು ಪತ್ರಿಕೆ ತಯಾರಿಸಹತ್ತಿದೆ. ನನ್ನಾಕೆಯ ನೆನಪು ಬಂತು ನಾನು ಅವಳಿಗೆ ಕೊಟ್ಟ ವಚನ ಈ ಸಾರೆಯಾದರೂ ಪೂರ್ಣಮಾಡಬೇಡವೇ? ಎಷ್ಟೋ ಸಲ ಹಟಹಿಡಿದು ಅತ್ತುಕರೆದು ರಾತ್ರಿ ಊಟವಿಲ್ಲದೆ ಮಲಗಿದ್ದಾಳೆ. ಅಂದ ಮೇಲೆ ಅವಳಿಗೊಂದು ಚನ್ನಾದ ಪತ್ತಲ ಆಗಬೇಕು. ಮತ್ತು ಒಂದು ಫ್ಯಾನ್ಸಿ ಬಂಗಾರದ ಬಳೆಯ ಜೋಡು. ಅಷ್ಟಕ್ಕೆ ತೀರಿತೇ? ನನ್ನ ಮಗು ಲತಾಗೆ ಏನೂ ಬೇಡವೇ? ಬೇಕು. ಏನಾದರೂ ತೆಗೆದುಕೊಂಡರಾಯಿತು. ಎಲ್ಲಾ ನೋಟುಬುಕ್ಕಿನಲ್ಲಿ ಗೀಚಿದೆ. ಕಳೆದು ಕೂಡಿಸಿ ಕೊನೆಯಲ್ಲಿ ತಿಂಗಳಿಗೆ ಸಾಲುವಷ್ಟು ಉಳಿತಾಯವಾದೀತೆಂತು ಕಂಡಿತು. ಬಲು ಹಿಗ್ಗಿದೆ. ಅಂತೂ ಈ ಸಲ ಮಾತು ನಡೆಸಲು ಬಂದೀತು ಎಂದು ಸಮಾಧಾನವಾಯಿತು. ಈ ಲೆಕ್ಕಾಚಾರದಲ್ಲಿ ಸ್ಟೇಶನ್ ಬಂದುದೂ ತಿಳಿಯಲಿಲ್ಲ. ಸ್ಟೇಶನ್ನಿನ ಗಂಟೆ ಬಾರಿಸಿದ ಕೂಡಲೇ ಎಚ್ಚರಾಯಿತು ಹಾರಿಕೊಂಡೆ. ಅಂತೂ ಸುರಕ್ಷಿತವಾಗಿ ಮನೆಯ ದಾರಿಹಿಡಿದೆ.

ಮನೆಯ ಎದುರು ಬಂದಾಗ ನನ್ನಾಕೆ ಶೀಲಾ ಮಗುವನ್ನು ಹಿಡಿದು ನನ್ನ ಬರುವಿಕೆಗಾಗಿ ಕಿಡಕಿಯ ಬಳಿ ಕಾದು ನಿಂತಿದ್ದಳು. ನನ್ನನ್ನು ಕಾಣುತ್ತಲೇ ಲತೆಯೂ ಚಪ್ಪಾಳೆ ಹೊಡೆದು ಕರೆಯಹತ್ತಿದಳು. ನಾನು ಮಹಡಿ ಯೇರಿ "ಲತಾ" ಎಂದು ಮಗುವನ್ನು ಕರೆದೆ

"ಅಪ್ಪಾ ಅಪ್ಪಾ" ಎನ್ನುತ್ತ ತಾಯಕೈಯಿಂದ ಇಳಿದು ಓಡುತ್ತ ಬಂದಳು. ಆದರೆ ನನ್ನಾಕೆ ಮಾತ್ರ ಮುಂಚಿನಂತೆಯೇ ನಿಂತಿದ್ದಳು. ಮುಖ ತುಸು ಉಬ್ಬಿದಂತೆ ಇತ್ತು. ಕೋಪದ ನಟನೆಯಿದ್ದಿರಬೇಕು. ನಾನೂ ಗಮನಿಸದೆ ನಮ್ಮ ಕೋಣೆಯೊಳಕ್ಕೆ ಹೋದೆ. ಆಗ ಅವಳು ಒಳಕ್ಕೆ ಬಂದು ನನ್ನ ಕೈಯಿಂದ ಕೋಟನ್ನು ಇಸಕೊಂಡು ಗೂಟಕ್ಕೆ ತೂಗಹಾಕಿದಳು. ನಾನು ಬೂಟಿನ ದಾರ ಬಿಚ್ಚುತ್ತಲೆ ಇದ್ದೆ. ನನ್ನಾಕೆ ಕುತೂಹಲದಿಂದ "ಬೋನಸ್ ಸಿಕ್ಕಿತೇ?" ಎಂದು ಕೇಳಿದಳು.

ಅವಳಿಗೂ ತಿಳಿದಿತ್ತು. ಇಂದು ನಮಗೆ ಬೋನಸ್ ಸಿಗುವದೆಂದು "ಅಹುದು ಸಂಬಳ ಕೂಡಾ ಇವತ್ತೇ ಕೊಟ್ಟರು" ಎಂದೆ. "ಏನು ಸಿಕ್ಕರೂ ನಿಮಗೆ ನನ್ನ ಪರಿವೆ ಇದೆಯೇ?" ಎಂದು ಕೊಂಕು ಮಾತನಾಡಿದಳು.

"ಶೀಲಾ, ನಿನಗೆ ಏನೆಲ್ಲ ಆಗಬೇಕು, ಎಲ್ಲಾ ಹೇಳಿ ಬಿಡು. ಅಂದರೆ ಈ ತಿಂಗಳು ಎಲ್ಲಾ ತಂದು ಕೊಡುತ್ತೇನೆ. ಈ ಸಾರೆ ತಪ್ಪುವದಿಲ್ಲ" ಎಂದು ಸಮಾಧಾನದಿಂದ ಹೇಳಿದೆ.

"ಮತ್ತೂ ದಾರ ಹೇಳಬೇಕೆ? ನಿಮಗೆ ಮರವು ಜಾಸ್ತಿ."

"ನೋಡು ಶೀಲಾ ನಾನು ಇಡೀ ಸಂಸಾರ ಸಾಗಿಸುವವ. ಅಫೀಸಿನಲ್ಲಿ ಕೆಲಸ ಮನೆಯಲ್ಲಿಯ ತಾಪತ್ರಯ ಅಂದ ಮೇಲೆ ನಾನೊಬ್ಬ ಎಷ್ಟೆಲ್ಲ ವಿಷಯ ನೆನಪು ಇಟ್ಟುಕೊಳ್ಳುವದು?"

"ನಿಮ್ಮ ಬೂಟ್ಸು ಪ್ಯಾಂಟುಇವುಗಳ ವಿಷಯವಾದರೆ?......ಚನ್ನಾಗಿ ನೆನಪು ಇರುತ್ತದಲ್ಲವೇ?" ಅಸಮಾಧಾನದಿಂದ ನುಡಿದಳು. "ಇಂದೇನು ಮನೆಗೆ ಬಂದಕೂಡಲೆ ಪ್ರಾರಂಭಿಸಿಬಿಟ್ಟೆಯಲ್ಲ. ಒಂದು ತುಸಾ ಕಾಫಿ ಗೀಫಿ ಕುಡಿಯಬಿಡು. ಆ ಮೇಲೆ ಎಲ್ಲಾ ಹೇಳುವೆಯಂತೆ" ಎಂದು ಬೂಟು ಬಿಚ್ಚಿ ಮೂಲೆಯಲ್ಲಿ ಇರಿಸಿದೆ. ಕಾಫಿ ಕುಡಿದು ಸೋಫಾದ ಮೇಲೆ ಕೂತು ನನ್ನಾಕೆಯೊಡನೆ ಮಾತನಾಡಹತ್ತಿದೆ.

## ಚಿಕ್ಕ ಕಥೆ

# ★ ಚಿಕ್ಕ—ದೊಡ್ಡವರು

ಬರೆದವರು: ನಾಗೇಶ ಶಾನಭಾಗ ಮುಂಬೈ

✲

"ನೋಡು ಶೀಲಾ, ನಾಳೆ ಶುಕ್ರವಾರ. ನಾಡದು ಶನಿವಾರದಿಂದ ನಮಗೆ ರಜೆ. ಶನಿವಾರ ತಪ್ಪಿದರೆ ರವಿವಾರವಾದರೂ ಪೇಟೆಗೆ ಹೋಗುವಾ ನಿನಗೆ ಬೇಕಾದ ತರಹದ ಪತ್ತಲ ಆರಿಸಿಕೋ ಮತ್ತೆ ಬಳೆ ಬೇಕಾದ್ದು ತೆಗೆಸಿಕೊಡುವೆ."

"ಅದೆಲ್ಲ ಸರಿ. ಆದರೆ ನಿಮ್ಮ ಕೈಯಲ್ಲಿ ಈ ರೂಪಾಯಿ ಉಳಿಯ ಬೇಕಲ್ಲವೆ? ಅಲ್ಲಾ ನಾನು ಕಂಡಿಲ್ಲವೆ ನಿಮ್ಮ ಸಂಸಾರ ನಡೆಸುವ ರೀತಿಯನ್ನ? ನಾಲ್ಕು ವರುಷಗಳಿಂದ ನೋಡುತ್ತಾ ಇದ್ದೇನೆ. ನಿಮಗೆ ಬೇರೆವರ ಬಗ್ಗೆ ತುಂಬಾ ಕನಿಕರ, ದಯೆ. ದಾನಧರ್ಮ ಮಾಡಲಿಕ್ಕೆ ನಿಮಗೆ ಇದ್ದಷ್ಟು ಸಾಲದು. ಅಂದ ಮೇಲೆ ಉಳಿತಾಯವೆಲ್ಲಿ? ನಿಮಗೇನು? ದುಡಿದು ತರುತ್ತೀರಿ ಆದರೆ ಇಲ್ಲಿ ಮನೆಯಲ್ಲಿ ಒಂದಿಲ್ಲ, ಒಂದಿದೆ ಎಂದು ನೋಡಿಕೊಂಡು ಹೋಗುವವರ್‍ಯಾರು? ನಾನೇ ಅಲ್ಲವೆ?"

"ಆಯಿತು. ಮಹಾರಾಯತಿ ನೀನೇ ಎಲ್ಲಾ ಮಾಡುತ್ತೀ ನಿನ್ನಷ್ಟು ಬುದ್ಧಿವಂತಿಕೆ ನನ್ನಲ್ಲಿಲ್ಲ ಅಂತ ಒಪ್ಪುವೆ ತೀರಿತೊ?"

"ತೀರುವದೇನು? ನಿಮ್ಮ ಹುಟ್ಟುಗುಣಾ ಸುಲಭದಲ್ಲಿ ಹೋದಾವೇ?"

"ಇಲ್ಲಾ, ಈಸಾರೆ ನನ್ನಾಣೆಯಾಗಿಯೂ ಒಂದು ಪೈ ಕೊಡುವದಿಲ್ಲ."

ಅಂತೂ ನನ್ನಾಕೆಗೆ ಸಮಾಧಾನ ಮಾಡಲು ಹವಣಿಸಿದೆ. ಆದರೆ ಅವಳ ಶಂಕೆ ಮಾತ್ರ ದೂರವಾಗಲಿಲ್ಲ.

* * * *

ಅವಧಾನಿ ಸುಬ್ಬಣ್ಣನವರು ನಮ್ಮ ನೆರೆಮನೆಯವರು. ಚಲೋ ಸಂಬಳದಾರರಾಗಿದ್ದರು. ಊರಲ್ಲಿ ಆಸ್ತಿಯೂ ಇದ್ದಿರಬೇಕು. ಈರೀತಿ ಯಾವುದರ ತೊಂದರೆಯೂ ಅವರಿಗೆ ಬಾಧಿಸುತ್ತಿರಲಿಲ್ಲ ಮನೆಯಲ್ಲಿ ೪–೫ ಮಕ್ಕಳು ಮತ್ತು ಚದುರೆಯಾದ ಹೆಂಡತಿ. ನಮಗೂ ಅವಧಾನಿಗಳಿಗೂ ಪರಿಚಯವಾಗುವದಕ್ಕೆ ಕಾರಣವೆಂದರೆ ಅವರು ನಮ್ಮ ಜಿಲ್ಹೆಯ ಕನ್ನಡಿಗರೆಂದು ಮುಂಬಯಿ ಮಹಾನಗರದಲ್ಲಿ ನಮ್ಮಕಡೆಯ ಒಬ್ಬ ಸಿಕ್ಕಿದರೂ ಮಾತನಾಡಿಸುವಾ ಎನ್ನಿಸುತ್ತದೆ. ಕನ್ನಡ ನುಡಿ ಕೇಳೋಣವೆನ್ನಿಸುತ್ತದೆ. ಹೀಗೆ ಪರಸ್ಪರರಲ್ಲಿ ಪರಿಚಯವಾಯಿತು. ಬರಬರುತ್ತ ನಮ್ಮ ಮೈತ್ರಿ ವಿಪರೀತವಾಯಿತು. (ಮೀರಿ ಮೀರಿತ್ತು ಎಂದು ಈಗ ತಿಳಿಯುತ್ತದೆ.) ಆದರೆ ನನ್ನಾಕೆಗೆ ಇದೆಲ್ಲ ರುಚಿಸದು. ಅವಳು ತುಸು ನಾಜೋಕಿನವಳು. ಎಲ್ಲರೊಡನೆಯೂ ಬೆರೆತು ಇರುವವಳಲ್ಲ. ಅವಳಿಗೆ ತುಸು ಗೌರವ ಬೇಕು. ಅವಳಲ್ಲಿ ತುಸು ಅಭಿಮಾನವೂ ಇದೆ. ಹೀಗಾಗಿ ನಮ್ಮಿಬ್ಬರ ಗೆಳೆತನಕ್ಕೆ ಅವಳ ಮಾನ್ಯತೆಯಿರಲಿಲ್ಲ.

ಮರುದಿನ ಶುಕ್ರವಾರ ಬೆಳಗಾಯಿತು. ಪ್ರಾತರ್ವಿಧಿಗಳನ್ನು ತೀರಿಸಿ ಕೋಣೆಯೊಳಕ್ಕೆ ಹೋಗುತ್ತಿದ್ದೆನಷ್ಟೆ "ಸೀತಾರಾಮ ಹೆಗ್ಗಡೆಯವರೇ" ಎಂದು ಕರೆದಂತಾಯಿತು. ಹೊರಳಿ ನೋಡಿದೆ, ಅವಧಾನಿಗಳು. ಕೌತುಕವಾಯಿತು ನನಗೆ "ಸೀತಾರಾಮು" ಎಂದು ಕರೆಯುವ ಅವಧಾನಿಗಳು ಇಂದು ಬಹುವಚನದಲ್ಲಿ ಕರೆಯುವರಲ್ಲಾ ಏನೋ ವಿಶೇಷವಿದ್ದಿರಬೇಕೆಂದೆನಿಸಿತು.

ಅಲ್ಲಿಯೇನಿಂತು, "ಏನಾಗಬೇಕು ಅವಧಾನಿಗಳೇ?" ಎಂದು ಕೇಳಿದೆ. ಬಳಿಗೆ ಬಂದು "ಒಳಕ್ಕೆ ಹೋಗಿ, ಎಲ್ಲಾ ಹೇಳುವೆ" ಎಂದು ಬೆನ್ನು ಚಪ್ಪರಿಸುತ್ತ ನನ್ನನ್ನು ನಮ್ಮ ಕೋಣೆಯೊಳಕ್ಕೆ ಒಯ್ದು ತಾವು ಮಂಚದ ಮೇಲೆ ಕೂತರು.

ಶೀಲಾ ಪಡದೆಯ ಆಚೆಯಿಂದ ಮುಂದೆ ಬಂದು ನೋಡಿ ಮತ್ತೆ ಮರೆಯಾದಳು. "ನೋಡಿ" ಎಂದು ಪ್ರಾರಂಭಿಸಿದರು. ಅವಧಾನಿಗಳು, "ನಮ್ಮ ಸರಕಾರಿ ನೌಕರರ ಸಂಕಟ ಹೇಳತೀರದು. ಬೇಡಿದಾಗ ರಜೆಯಿಲ್ಲ. ತಿಂಗಳಿನ ಸಂಬಳ ಒಮ್ಮೆ ಒಂದನೇ ತಾರೀಖಿಗೆ ಒಮ್ಮೆ ಆರನೇ ತಾರೀಖಿಗೆ ಹೀಗೆ ಮನಸ್ಸಿಗೆ ಬಂದಾಗ ಕೊಡುವರು. ನಮ್ಮ ದೂರು ಕೇಳುವವರಾರು. ಸರಕಾರವೆಂದಮೇಲೆ ದೂರು ತಲಪುವದಕ್ಕೆವರು ಷಾರು ತಿಂಗಳು ಬೇಕು. ಅಷ್ಟರತನಕ ನಮ್ಮ ಹೊಟ್ಟೆಗೆ ಮಣ್ಣು. ನಿಮ್ಮ ಅಫೀಸಿನಂತೆಯೆ? ನಿಮ್ಮ ಅಫೀಸು ಇಡೀ ಮುಂಬಯಿಯಲ್ಲಿ ಹಿರಿದು ನೋಡಿ. ಏನು ವ್ಯವಸ್ಥೆ ಅವರದು! ಎಷ್ಟ ಥಾಟು ಅಲ್ಲಿಯದು! ಒಬ್ಬ ಹೊಸಬ ಬಂದ ಅಂದರೆ "ಜೀ ಸರಕಾರ" ಎಂತ ಸಲಾಮು ಮಾಡಿ ಬಂದ ಕೆಲಸಮಾಡಿ ಕೊಡುವರು. ಸಂಬಳವಂತೂ ನಿಯಮವಾಗಿ ಕೊಡುತ್ತಾರೆ. ನಮ್ಮಂತೆ ಯಾವದೇ ತಾಪತ್ರಯವಿಲ್ಲ."

"ಸಂಬಳ," ಎಂಬ ಶಬ್ದ ನನ್ನಾಕೆಯ ಕಿವಿಗೆ ಚನ್ನಾಗಿ ಕೇಳಿಸಿರಬೇಕು. ಮತ್ತೊಮ್ಮೆ ಈಚೆಗೆ ಬಂದು ಅವರ ಕಡೆಗೊಮ್ಮೆ ಮತ್ತೆ ನನ್ನ ಕಡೆಗೊಮ್ಮೆ ಬಿರುಗಣ್ಣಿನಿಂದ ನೋಡಿ ಮೋರೆ ತಿರುವಿಸಿ ಮತ್ತೆ ಮರೆಯಾದಳು.

"ಕ್ಷಮಿಸಿ, ನಿಮ್ಮ ವೇಳೆ ಹಾಳು ಮಾಡುತಿದ್ದೇನೆ."

"ಏನು ಕ್ಷಮೆ? ಇದೇನು ನೀವು ಕ್ಷಮೆ ಕೇಳಬೇಕಾಗಿಲ್ಲ" ಎಂದು ನಗುತ್ತ ಹೇಳಿದೆ. ದಿನವೂ ನನ್ನ ಸಂಗಾತ ಗಂಟೆಗಟ್ಲೆ ಹರಟೆ ಕೊಚ್ಚುವ ಅವಧಾನಿಗಳಿಗೆ ಇಂದು ವೇಳೆಯ ಮಹತ್ವ ತಿಳಿಯಿತೆ?

"ನನ್ನಾಕೆಗೆ ತಿಂಗಳು ತುಂಬಿತು. ಇಂದೋ ನಾಳೆ ಹೆರಿಗೆಯಾಗಬಹುದು. ಭರವಸೆಯಿಲ್ಲ. ಎಲ್ಲರೂ ಅನ್ನುತ್ತಿರಬೇಕು ನನಗೆ ತುಂಬ ಸಂಬಳ ಬರುತ್ತದೆಂದು. ಆದರೆ ದಿಟ ಹೇಳಬೇಕೆಂದರೆ, ತಿಂಗಳ ಕೊನೆಗೆ ಕೈಯಲ್ಲಿ ತಾವ್ರದ ಒಂದು ದುಡ್ಡೂ ಇರುವದಿಲ್ಲ."

"ಎಲ್ಲರ ಹಾಡೂ ಹಾಗೆಯೇ ನಿಮ್ಮದೇನೂ ವಿಶೇಷವಲ್ಲ," ಎಂದು ಮಾತು ಹಾರಿಸಬಯಸಿದೆ.

"ನೋಡಿ, ನನ್ನಾಕೆಯ ಹೆಸರನ್ನೇನೂ ಹೆರಿಗೆಯ ಅಸ್ಪತ್ರೆಯಲ್ಲಿ ಬರೆದಿಲ್ಲ. ಮನೆಯಲ್ಲಿಯೇ ಮಾಡುವಾ ಅಂತ ಅತ್ತೆಮ್ಮನವರು ಹೇಳಿದರು. ಮನೆಯಲ್ಲಿ ಅಂದಮೇಲೆ ಅದಕ್ಕೆ ತಕ್ಕ ತಯಾರಿಯಾಗಬೇಡವೇ? ಅದಕ್ಕೆಲ್ಲ ಹಣ ಬೇಕು. ಈಗ ನನ್ನಕೈಲಿ ಪೈಯೊಂದಿಲ್ಲ. ಸಂಬಳವಾಗುವದಕ್ಕೆ ಇನ್ನೂ ಒಂದು ವಾರ ಹೋಗಬೇಕು. ಕಾರಣ ನಿಮ್ಮ ಕೈಲಿ........." ಎಂದು ಹುಚ್ಚುನಗೆ ನಕ್ಕು ಅಂಗಲಾಚಿ ಬೇಡಹತ್ತಿದರು, ಕೈಮುಗಿದರು.

"ಛೆ, ಛೆ. ಹಾಗೆ ಮಾಡಬಾರದು. ನೀವು" ಎಂದು ತಡೆದೆ ಅವರನ್ನು. "ಕಾರಣ ನಿಮ್ಮ ಕೈಲಿ ಒಂದು ಐವತ್ತು ರೂಪಾಯಿ ಇಸಗೊಂಡು ಹೋಗೋಣ ಅಂತ ಬಂದೆ. ನಮ್ಮ ಸಂಬಳವಾದ ದಿವಸವೇ ನಿಮ್ಮ ಹಣ ವಾಪಸ್ಸು ಮಾಡುತ್ತೇನೆ. ಖಂಡಿತ" ಎಂದು ಮತ್ತೆ ಕೈಮುಗಿದರು. ಕಣ್ಣಿಗೆ ನೀರು ತರಿಸಿದರು.

ನಾನು ತುಂಬಾ ಕನಿಕರದವನು. ಮನಸ್ಸಿನಲ್ಲಿ ಏನೊ ಅನಿಸಿತು. ಆದರೆ ತಕ್ಷಣ ನನ್ನಾಕೆಯ ನೆನಪಾಯಿತು. ಮನಸ್ಸು ಗಟ್ಟಿಯಾಗುವಂತೆ ತಡೆದೆ

"ನಿಮಗೆ ನನ್ನ ಮೇಲೆ ವಿಶ್ವಾಸವಿಲ್ಲವೇ?"

"ವಿಶ್ವಾಸವಿಲ್ಲವೆಂದು ಯಾರು ಹೇಳಿದರು? ಆದರೆ, ನನ್ನ ಕೈಲಿ ಏನೂ ಇಲ್ಲವಲ್ಲ," ಎಂದು ಒಳಕೋಣೆಯ ಕಡೆ ಹೋದೆ.

"ನಿಮಗೆ ನಿನ್ನೆ..." ಎಂದು ಅವಧಾನಿಗಳು ಏನೋ ಅನ್ನುತ್ತಿದ್ದರು. ನನಗೆ ಕೇಳಿಸಲಿಲ್ಲ.

ಶೀಲಾ ನನ್ನನ್ನು ಕಾಣುತ್ತಲೇ ಸಿಟ್ಟಿನಿಂದ ಮಾತಾಡಿಸಲೇ ಇಲ್ಲ. ನಾನು ಅವಳಿಗೆ ಹೇಳಿದೆ, "ನೋಡು ನಿನಗೆ ಇಷ್ಟೂ ತಿಳಿಯುವದಿಲ್ಲವೇ? ನಾನೇನು ಹಣವನ್ನು ದಾನ ಮಾಡುತ್ತೇನೆಯೋ? ಅವರಿಗೆ ಒಂದು ಐವತ್ತು ರೂಪಾಯಿ ಈಗ ಕೊಟ್ಟರೆ ಒಂದು ವಾರದಲ್ಲಿ ತಿರುಗಿ ಸಿಗುತ್ತವೆ. ಅಂದಮೇಲೆ ಕೊಡಲಿಕ್ಕೆ ಅಡ್ಡಿಯೇನು?"

"ಅಡ್ಡಿಯೇನು? ನಿಮ್ಮ ಗೆಳೆಯರನ್ನೆಲ್ಲ ಬಲ್ಲೆ. ಎಲ್ಲರೂ ಶುದ್ಧ ಠಕ್ಕರು. ದುಡ್ಡಿಗಾಗಿ ನಿಮ್ಮ ಸುತ್ತು ತಿರುಗುವವರು. ನೀವೇನೊ ಹೇಳ್ತೀರಿ. ಆದರೆ ಅವರು ತಿರುಗಿ ಕೊಡುವರೆಂದು ನನಗೆ ನಂಬಿಗೆಯಿಲ್ಲ."

"ನಿನಗೆ ನನ್ನ ಮೇಲೆಯಾದರೂ ಭರವಸೆಯಿಲ್ಲವೇ?" "ಇಲ್ಲದೆಯೇನು? ಆದರೆ ನನಗೆ ಬೇಕಾದ ಪತ್ತಲ—ಬಳೆ ತರುವದು ಯಾವಾಗ?" "ಅಲ್ಲಾ ನೋಡು ಅದಕ್ಕೂ ಇದಕ್ಕೂ ಏನು ಸಂಬಂಧ? ಐವತ್ತುರೂಪ್ಯಾ ಕೊಟ್ಟರೆ ಉಳಿದ ಹಣದೊಳಗಿಂದ ತರಬಹುದು."

"ನಂತರ ಉಳಿದ ಹಣ ಹದಿನೈದು ದಿನ ನಿರ್ವಾಹಕ್ಕೆ ಸಾಲದಲ್ಲ?" "ಅದಕ್ಕೆ ನಾನೆಲ್ಲ ಯೋಚನೆ ಮಾಡುತ್ತೇನೆ. ನಿನಗೆ ತುಸುವೂ ಕನಿಕರವಿಲ್ಲ ನೋಡು," ಎಂದೆ.

"ನಿಮಗೆ ಇದ್ದದ್ದೇ ಸಾಕು. ನೀವು ಮನೆಯ ಗಂಡಸರು. ನಿಮಗಿರಬೇಕು ಧೂರ್ತತನ. ಮುಂದೆ ಬೇಕು ಎಂದರೆ ಒಂದು ಪೈ ಸಿಗುವಂತಿಲ್ಲ. ನಿಮಗೆ ಮನಸ್ಸಿಗೆ ಬಂದಂತೆ ಮಾಡಿ" ಎಂದು ನನ್ನ ಕೈಗೆ ಕೀಲಿಕೈ ಇತ್ತಳು. ನಾನು ಹತ್ತರ ಐದು ನೋಟುಗಳನ್ನು ತೆಗೆದುಕೊಂಡು ಹೊರಕ್ಕೆ ಬಂದೆ.

"ನಿಮ್ಮ ಗುಣ ನನಗೆ ಗೊತ್ತಿಲ್ಲವೆ? ನೀವು ತುಂಬಾ ಉದಾರರು. ತನ್ನಿ" ಎಂದು ಕೈ ಚಾಚಿದರು. ಅವರ ಕೈಗೆ ಹಣವನ್ನಿತ್ತೆ.

"ತುಂಬಾ ಉಪಕಾರವಾಯಿತು. ಎರಡನೇ ತಾರೀಖಿಗೆ ನಾನೇ ಬಂದು ನಿಮ್ಮ ಹಣ ಫೇಡ (Paid) ಮಾಡುತ್ತೇನೆ. ಖಂಡಿತ," ಎಂದು ನಮಸ್ಕರಿಸಿ ಹೊರಬಿದ್ದರು.

ನಾನು ಒಳಕ್ಕೆ ಹೋಗಿ ಕಾಫಿ ಕುಡಿಯಲು ಕೂತೆ.

"ನಾನು ಮುಂಚೆಯೇ ಹೇಳಿರಲಿಲ್ಲವೇ? ನಿಮ್ಮ ಕೈಲಿ ಹಣವು ಇರುವದಿಲ್ಲೆಂದು; ನೀವೆಲ್ಲ ಕೇಳುತ್ತೀರಿ? ಮುಂದೆನಾದೀತು ಎಂಬುದರ ಪರಿವೆಯೇ ಇಲ್ಲ ನಿಮಗೆ" ಎಂದು ಚುಚ್ಚಿ ಮಾತಾಡಿದಳು ಶೀಲಾ.

ನಾನು ಮಾತನಾಡಲಿಲ್ಲ.

"ನನ್ನ ಮಾತು ಕೇಳಿ. ಹೀಗೆ ಮಾಡಿ ನಿಮ್ಮ ಗಿರಾಕಿಯನ್ನು ನಂಬಿ ಕೂತರೆ ಈ ತಿಂಗಳು ನಾವು ಉಪವಾಸ ಬೀಳಬೇಕಾಗುವದು. ಕಾರಣ ಮುಂದಿನ ತಿಂಗಳೇ ನನ್ನ ಪತ್ತಲು ಬಳೆ ತರಬಹುದು. ಅಷ್ಟೇನು ಅವಸರವಿಲ್ಲ," ಎಂದು ಸೂಚಿಸಿದಳು.

"ಶೀಲಾ, ಇದೇ ತಿಂಗಳು ಪತ್ತಲ—ಬಳೆ ತೆಗೆದುಕೊಳ್ಳಲೇನಡ್ಡಿ? ಹಣವಂತೂ ಇದೆಯಲ್ಲಾ. ಉಳಿದ ಹಣ ಸಾಲದಿದ್ದರೆ ಅವಧಾನಿಗಳು ಕೊಡುವದಿಲ್ಲವೇ? ಅದರ ಯೋಚನೆ ನಿನಗ್ಯಾಕೆ?"

"ಬೇಕಾದ್ದು ಮಾಡಿ. ನನ್ನಮಾತು ನೋಡು ವಿರಂತೆ," ಎಂದು ಸುಮ್ಮನಾದಳು.

* * * *

ರವಿವಾರ ದಿನ ನಾನು ನನ್ನಾಕೆಯನ್ನು ಕರೆದುಕೊಂಡು ಪೇಟೆಗೆ ಹೋದೆ. ಪೇಟೆಯಲ್ಲೆಲ್ಲ ಜನಸಮ್ಮರ್ದ ಹೇಳತೀರದು. ಅಂತೂ ಜವಳಿ ಅಂಗಡಿಗೆ ತಲುಪಿ ಆಯಿತು. ತರತರಹದ ಪತ್ತಲಗಳನ್ನು ತೋರಿಸಿದರು. ಆದರೆ ಶೀಲೆಯ ಮುಖದ ಮೇಲೆ ಗೆಲುವಿನ ಚಿಹ್ನವಿಲ್ಲ. ಮುಖ ಬಾಡಿತ್ತು! ಮನಸ್ಸಿನಲ್ಲಿ ಏನೋ ಕಟಿಯುತ್ತಿದ್ದಿರಬೇಕು. ಅಂತೂ ಕೊನೆಗೊಮ್ಮೆ ಗುಲಾಬಿ ಬಣ್ಣದ ಪತ್ತಲೊಂದನ್ನು ಆರಿಸಿದೆ. ನಾನು ಅದನ್ನು ಬಹುವಾಗಿ ಮೆಚ್ಚಿದೆ. ಯಾಕಂದರೆ ಅದು ಶೀಲೆಗೆ ಸರಿಯಾಗಿ ಒಪ್ಪುತ್ತಿತ್ತು. ಅಲ್ಲಿಂದ ಚಿನಿವಾಲ ಕಟ್ಟೆಗೆ ಹೋದೆವು. ಅಲ್ಲಿಯೂ ಜನಸಮ್ಮರ್ದ ಕಡಿಮೆಯಿರಲಿಲ್ಲ. ಜನ ಬಂಗಾರದ ದರವನ್ನು ಗಮನಿಸುತ್ತಿಲ್ಲವೋ ಏನೋ! ಈ ಜಗ್ಗಾಟ—ನುಗ್ಗಾಟದಲ್ಲಿ ಸಾಕಾಗಿ ಹೋಯಿತು.

—೧೫ನೇ ಪುಟಕ್ಕೆ